ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಗ್ರಂಥಮಾಲೆ-೫೬

---

# ಚಿತ್ಸ್ವರೂಪ

( ವಚನ ಸಂಕಲನ )

ಕರ್ತರು :

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
ಮೂರುಸಾವಿರಮಠ ಹುಬ್ಬಳ್ಳಿ.

೧೯೮೩

ಪ್ರಕಾಶಕರು :
ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ,
ಮೂರುಸಾವಿರಮಠ, ಹುಬ್ಬಳ್ಳಿ.

ಪ್ರಥಮ ಮುದ್ರಣ-೧೯೭೩
ದ್ವಿತೀಯ ಮುದ್ರಣ-೧೯೭೭
ತೃತೀಯ ಮುದ್ರಣ-೧೯೮೩



ಪ್ರತಿಗಳು : ಒಂದು ಸಾವಿರ

ಬೆಲೆ : ಎಂಟು ರೂಪಾಯಿಗಳು.

ಮುದ್ರಕರು :
"ಪರಂಜ್ಯೋತಿ" ಪಾವರ ಪ್ರಿಂಟಿಂಗ್ ಪ್ರೆಸ್,
ಮೂರುಸಾವಿರಮಠ, ಹುಬ್ಬಳ್ಳಿ.



ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
ಮೂರುಸಾವಿರಮಠ ಹುಬ್ಬಳ್ಳಿ.

# ಮುನ್ನುಡಿ

ವಚನ ಭಾಂಡಾರದ ಶಾಂತರಸರು ಇದೀಗ ತಮ್ಮ ಅಸಂಖ್ಯಾತಗಳಾದ ವಚನಕಾರರ ಭಾಂಡಾರದಲ್ಲಿ ಶ್ರೀಮೂಜಗಂ ಈ ಹೆಸರನ್ನು ಸೇರಿಸಿಕೊಳ್ಳಬೇಕಾಗುತ್ತದೆ. ಅಲೇಖನಾದ ಶೂನ್ಯದಲ್ಲಿ ಅವರ ಪರವಾಗಿ ನಾವೇ ಇಂದು ಆ ಕಾರ್ಯವನ್ನು ಪೂರೈಸಲೆ ಬೇಕಾಗಿದೆ, ವಚನ ಸಾಹಿತ್ಯ ಅವುದೊಂದು ಕಾಲ, ದೇಶಗಳಿಗೆ ಮಾತ್ರ ಪರಿಮಿತವಾದುದಲ್ಲ. ಅನುಪಮ ಅರಳಿ-ದಲ್ಲಿ ವಚನ ಸಾಹಿತ್ಯದ ಸೌರಭ ಸೂಸುತ್ತದೆ. ಅದು ಬೆಳಗಿ-ನೊಳಗಿನ ಮಹಾ ಬೆಳಗಿನ ಸಾಕ್ಷಾತ್ಕಾರದ ತಿರುಳು, ಅನಿರ್ವಚ-ನೀಯವಾದ ಪರಮಾನಂದವನ್ನು ಸ್ಫುಟಗೊಳಿಸುವ ನಿಶ್ಶಬ್ದ-ಸ್ವರೂಪ; ಶಬ್ದ ಅದರ ಹೊರಮೈ ಮಾತ್ರ. ಅನುಭಾವದ ಮಿಂಚು ಪಳಂಚಿ ವಚನ ಸಾಹಿತ್ಯ ವರ್ಷಾಕಾರವಾಗಿ ಸುರಿಯು-ತ್ತಿದೆ. ಇಂತಹ ಸಾಹಿತ್ಯವನ್ನು ಅಮರ ಸಾಹಿತ್ಯ, ಅಮೃತ ಸಾಹಿತ್ಯವೆಂದು ಕರೆಯಬೇಕಾಗುತ್ತದೆ.

ಇಂತಹ ವಚನ ಸಾಹಿತ್ಯದ ಮೂಲವೆಲ್ಲಿ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಉಪಲಬ್ಧವಿದ್ದ ವಚನಕಾರರಲ್ಲಿ ದೇವರ ದಾಸಿಮಯ್ಯನವರು ಪ್ರಾಚೀನರೆಂದು ತೋರುತ್ತದೆ. ಆದರೆ ದೇವರ ದಾಸಿಮಯ್ಯನವರ ವಚನಗಳು ಅನುಭಾವ, ಭಾವ, ಭಾಷೆ, ತಾಳ, ಲಯಗಳ ದೃಷ್ಟಿಯಿಂದ ಅತ್ಯಂತ ಪರಿಪೂರ್ಣ

ಸ್ಥಿತಿಯಲ್ಲಿದ್ದಂತೆ ತೋರುತ್ತದೆ. ಒಂದು ಸಾಹಿತ್ಯ ಪ್ರಕಾರ ಇಂತಹ ಪರಿಪೂರ್ಣ ಸ್ಥಿತಿಯನ್ನು ಮುಟ್ಟಬೇಕಾದರೆ ಅದರ ಹಿಂದೆ ಹಲವು ಶತಮಾನಗಳ ಕೃಷಿ ಇರಬೇಕಾಗುತ್ತದೆ. ಪಂಪ ಭಾರತದಂತಹ ಉತ್ಕೃಷ್ಟ ಕೃತಿ ಮೈದೋರಬೇಕಾದರೆ ಕ್ರಿ.ಶ.೪-೫ ನೆಯ ಶತಮಾನಗಳಿಂದ ಚಂಪುವಿನ ಕೃಷಿ ನಡೆದಿತ್ತು. ಈ ಅನುಭಾವದ ಕೊನೆಯಲ್ಲಿ ಪಂಪನಂತಹ ಮಹಾ ಕವಿ ಅವತರಿಸಿ; ಚಂಪು ಸಂಪ್ರದಾಯ ಪ್ರತಿಷ್ಠಾಪನಾಚಾರ್ಯರಾದ ಹರಿಹರ ರಾಘವಾಂಕರು, ರಗಳೆ ಷಟ್ಪದಿಗಳಲ್ಲಿಸಂಪ್ರದಾಯಕ್ಕೆ ಆಚಾರ್ಯ ಪುರುಷರಾಗಬೇಕಾದರೆ, ವಚನ ಸಾಹಿತ್ಯದ ಅಪಾರವಾದ ಅನುಭವದ ಆಸರವಿದ್ದಿತು. ದೇವರ ದಾಸಿಮಯ್ಯನವರ ಹಿಂದೆ ಇನ್ನೂ ಕೆಲ ಶತಮಾನಗಳಿಂದ ವಚನ ವಾಹಿನಿ ಪ್ರವಹಿಸಿರುವ ಸಂಭವವಿರುತ್ತದೆ. ಆ ಪ್ರವಾಹ ಗುಡ್ಡಬೆಟ್ಟಗಳನ್ನು ಕೊರೆದು, ದರಿ ಕಂದರಗಳನ್ನು ದಾಟಿ, ಬೈಲು ಪ್ರದೇಶಕ್ಕೆ ಬಂದು ಶಾಂತ ಗಂಭೀರವಾಗಿ ಪ್ರವಹಿಸಿರಬೇಕಾಗುತ್ತದೆ. ಭಾಷೆ ಹದಗೊಳ್ಳಬೇಕಾದರೆ, ರೂಪಕ ಪರಂಪರೆ ಸಿದ್ಧಿಯಾಗಬೇಕಾದರೆ, ಅನುಭಾವದ ಎತ್ತರ ಬಿತ್ತರ ಆಳಗಳನ್ನು ಸೆರೆಗೈಯುವ ತ್ರಾಣ ಅದಕ್ಕೆ ಬರಬೇಕಾದರೆ, ಹನ್ನೊಂದನೆಯ ಶತಮಾನದ ಹಿಂದೆ ನಾಲ್ಕೈದು ಶತಮಾನಗಳ ವರೆಗಿನ ಕೃಷಿ ನಡೆದಿರಬೇಕು.

ದಕ್ಷಿಣ ಭರತ ಖಂಡದಲ್ಲಿ ಶೈವ ಧರ್ಮ ಅತಿ ಪ್ರಾಚೀನ ಕಾಲದಿಂದಲೂ ರೂಢವಾಗಿದ್ದಿತು. ಜೈನ, ಬೌದ್ಧ ಧರ್ಮಗಳ

ಪ್ರಾಬಲ್ಯದಿಂದ ಶೈವ ಧರ್ಮಗಳ ಪ್ರಗತಿಗೆ ವಿಶೇಷವಾದ ತಡೆ-
ಯುಂಟಾಯಿತು. ಈ ಕಾರ್ಯ ಕ್ರಿ. ಶ. ಪೂರ್ವ ಸುಮಾರು
ಮೂರನೆಯ ಶತಮಾನದಿಂದ ಕ್ರಿ. ಶ. ಮೂರು ನಾಲ್ಕನೆಯ
ಶತಮಾನಗಳವರೆಗೆ ಅವಿಚ್ಛಿನ್ನವಾಗಿ ನಡೆದಂತೆ ತೋರುತ್ತದೆ.
ಕ್ರಿ. ಶ. ಐದನೆಯ ಶತಮಾನದಿಂದ ದಕ್ಷಿಣ ಭರತ ಖಂಡದಲ್ಲಿ
ಒಮ್ಮೆಲೆ ಈ ನಾಸ್ತಿಕ ಪಂಥಗಳಿಗೆ ವಿರೋಧ ತಲೆದೋರಿದೆ.
ತಮಿಳ ನಾಡಿನ ನಾಯ ನಾರ್ಯರು ಈ ಕಾರ್ಯವನ್ನು ಪ್ರಥ-
ಮತಃ ಕೈಕೊಂಡರು. ಇವರನ್ನು ೬೩ ಪುರಾತನರೆಂದು ಕರೆಯ-
ಲಾಗುತ್ತದೆ. ಅವರ ತೇವಾರಂ ಸಾಹಿತ್ಯ ತಮಿಳ ದೇಶದಲ್ಲಿ
ಅನುಭವ ಸಾಹಿತ್ಯದ ಅಗ್ರಸ್ಥಾನದಲ್ಲಿದೆ ಈ ಜೈನ, ಬೌದ್ಧ
ಮತಗಳ ವಿರುದ್ಧ ಹೋರಾಟ ಕನ್ನಡ ನಾಡಿನಲ್ಲಿಯೂ ಅದೇ
ಕಾಲಕ್ಕೆ ನಡೆದಿರುವ ಸಂಭವವಿದೆ. ತೇವಾರಂ ಇದಕ್ಕೆ ಸಮವಾದ
ಸಾಹಿತ್ಯ ಕನ್ನಡದಲ್ಲಿಯೂ ಉದಯವಾಗಿರಬೇಕು. ಶಿವಶರಣರು
ಹಾಡುಗಳನ್ನು ರಚಿಸಿರುವರೆಂದು ತಿಳಿದುಬರುತ್ತದೆ. ನಮಗೆ
ಉಪಲಬ್ಧವಿದ್ದ ವಚನ ಸಾಹಿತ್ಯದಲ್ಲಿ ೧೨ನೆಯ ಶತಮಾನದ
ವಚನಕಾರರ ಕೆಲವು ಅನುಭಾವದ ಹಾಡುಗಳು ದೊರೆಯುತ್ತವೆ.
ಈ ಹಾಡುಗಳು ತಮಿಳಿನ ತೇವಾರಂ ಸಾಹಿತ್ಯಕ್ಕೆ ಹೊಲ್ವ ಕೈಯಾ
ಗಿವೆ. ಮೊದಮೊದಲು ಕ್ರಿ. ಶ. ೪-೫ ಶತಮಾನಗಳಿಂದ ಈ
ಹಾಡಿನ ರೂಪದ ಅನುಭಾವ ಸಾಹಿತ್ಯ, ಕನ್ನಡದಲ್ಲಿಯೂ
ಮೈದೋರಿ, ಒಳಒಳಗೆ ಅದು ಗದ್ಯದ ತಾಳ ಲಯಗಳ ಸ್ವರೂ

ಪವನ್ನು ಪಡೆಯುತ್ತ ನಡೆದಿರಬೇಕು. ಅಂದರೆ ವಚನ ಸಾಹಿ
ತ್ಯಧ ಕೃಷಿಯು ಕ್ರಿ. ಶ. ೪. ೫ನೇ ಶತಮಾನದ ಹಿಂದಿನಿಂದ
ನಡೆದಂತೆ ಊಹಿಸಬೇಕಾಗುತ್ತದೆ. ಈ ದಿಶೆಯಲ್ಲಿ ಸಂಶೋಧನೆ
ಇನ್ನೂ ಅಗತ್ಯವೆಂದು ಬೇರೆ ಹೇಳುವ ಅವಶ್ಯಕತೆಯಿಲ್ಲ.

ವಚನಸಾಹಿತ್ಯ ಚರಿತ್ರೆಯಲ್ಲಿ ಷಟ್‌ಸ್ಥಲಗಳನ್ನು ರೂಪಿಸ
ಬೇಕಾಗುತ್ತದೆ. ಮೊದಲನೆಯದು ದೇವರದಾಸಿಮಯ್ಯನವರ
ಹಿಂದಿನಕಾಲ. ಎರಡನೆಯದು ಬಸವಾದಿ ಪ್ರಮಥರ ಕಾಲದ
೧೨ನೆಯ ಶತಮಾನ. ಮೂರನೆಯದು ೧೫ನೆಯ ಶತಮಾನದ
ಪುನರುತ್ಥಾನ ಯುಗ. ನಾಲ್ಕನೆಯದು ಶೂನ್ಯ ಸಂಪಾದನೆಗಳ
ರಚನೆಯಕಾಲ. ಐದನೆಯದು ವಚನಗಳ ವ್ಯಾಖ್ಯಾನಕ್ಕೆ ಪ್ರಸಿದ್ಧ-
ವಾದ ೧೬ನೆಯ ಶತಮಾನ. ಆರನೆಯದು ತೋಂಟದ ಸಿದ್ಧ-
ಲಿಂಗ ಶಿವಯೋಗಿ, ಷಣ್ಮುಖ ಶಿವಯೋಗಿಗಳ ಕಾಲದ ಸೃಜನ-
ಯುಗ ಈ ಕೊನೆಯ ಯುಗವೆ ಇಂದಿಗೂ ಮುಂದುವರಿದು
ಕೊಂಡು ಬಂದಿದೆ. "ಶ್ರೀ ಮುಜಗಂ" ವಚನಗಳು ಈ
ಕೊನೆಯ ಸ್ಥಲಕ್ಕೆ ಸಂಬಂಧ ಪಟ್ಟವು.

ಇತ್ತೀಚೆಗೆ ಕೆಲವು ಜನ ಸಾಹಿತ್ಯತಜ್ಞರು ವಚನ ರೂಪ
ದಲ್ಲೇ ಬರೆದದ್ದನ್ನೆಲ್ಲ ವಚನ ಸಾಹಿತ್ಯವೆಂದು ಕರೆಯತೊಡಗಿರು-
ವರು. ರಂಗಣ್ಣನವರ ವಚನಗಳು, ಸಾಮಾಜಿಕ ಸಂವಚನಗಳು
ಮುಂತಾದವನ್ನು ವಚನ ಸಾಹಿತ್ಯ ಚರಿತ್ರೆಗೆ ಸೇರಿಸುವ ಸಾಹಸ

ಕಾರ್ಯ ನಡೆದಿರುತ್ತದೆ ವಚನ ಸಾಹಿತ್ಯಕ್ಕೆ ಮೂಲ ನಿಧಿ ಅದರ ಬಾಹ್ಯ ರೂಪವಲ್ಲ, ಅದರ ಧಾರೆಯಲ್ಲ, ಅನುಭಾವವೆ ಅದರ ಅಂತರಂಗ ಆ ಶಿವಾನುಭಾವ ತಂತಾನೆ ಅರಳಿ ವಚನ ಸಾಹಿತ್ಯ ವಾಗುತ್ತದೆ. ಆದುದರಿಂದ ಇದು ವಚನ ಎಂದು ಹೇಳಬೇಕಾದರೆ ಮೊದಲು ಅದರ ಸ್ಥಾಯಿ ಏನೆಂಬುದನ್ನು ನೋಡಬೇಕಾಗುತ್ತದೆ. ಮೂಜಗಂ ವಚನಗಳು ನಿಃಸ್ಸಂದೇಹವಾಗಿ ನಮ್ಮ ವಚನ ಸಾಹಿತ್ಯದ ಉಜ್ವಲ ಪರಂಪರೆಯಲ್ಲಿ ದೇದಿಪ್ಯಮಾನ-ವಾಗಿ ಬೆಳಗುತ್ತವೆ.

ಮೂಜಗಂ ಹರಕರುಣೋದಯದಿಂದ ಜನ್ಮವೆತ್ತವರು. ಮಹಾ ತಪಸ್ವಿಗಳಾದ ಇಲಕಲ್ಲ ಶ್ರೀ ವಿಜಯಮಹಾಂತ ಶಿವ-ಯೋಗಿಗಳವರ ಸದ್ವಂಶದಲ್ಲಿ; ಹಾನಗಲ್ಲ ಕುಮಾರಸ್ವಾಮಿಗಳ ಪರಮಾಶೀರ್ವಾದ, ಹಾಗೂ ಪವಿತ್ರ ಸಂಕಲ್ಪದಿಂದ ಜನಿಸಿದ ಪುಣ್ಯಶಿಶು. ಮೂರು ನಾಲ್ಕು ವರುಷಗಳ ಶೈಶವದಲ್ಲಿಯೆ ಶಿವ-ಯೋಗ ಮಂದಿರದ ಪವಿತ್ರ ವಾತಾವರಣ ಪ್ರಾಪ್ತವಾಯಿತು. ಮಗುವಿಗೆ ಧೂಳಕ್ಕರದ ಶಿಕ್ಷಣ ಮೊದಲ್ಗೊಂಡು ಆಧ್ಯಾತ್ಮ ಶಿಕ್ಷಣದವರೆಗಿನ ಎಲ್ಲ ವಿದ್ಯೆ ಶಿವಯೋಗಮಂದಿರದ ಬಯಲಿನಲ್ಲಿ ದೊರೆಯಿತು. ಆ ಬಯಲು ಅವರಿಗೆ ಬೆಳಕಾಯಿತು. ಹರಿಯುವ ಮಲಪ್ರಭೆ, ಎದ್ದುನಿಂತ ಬೆಟ್ಟ, ಗಿಡಗಂಟಿಗಳ ಕೊರಳೊಳಗಿಂದ ಬರುವ ಉಲಿವು, ಇವೆಲ್ಲ ಶ್ರೀಗಳ ಕಾವ್ಯದಲ್ಲಿ ಕಣ್ದೆರೆದು ಮುಂದೆ ಕಾಶಿಗೆ ಹೋಗಿ ಸಂಸ್ಕೃತ ಹಾಗೂ ಇಂಗ್ಲೀಷಿನಲ್ಲಿ ಉಚ್ಚ ಅಭ್ಯಾಸಮಾಡಿ ಉನ್ನತ ಪದವಿಗಳನ್ನು ಪಡೆದರೂ ಶಿವಾನುಭಾವ

ಕಾವ್ಯಾನುಭಾವಗಳು ಅವರನ್ನು ಕೈಬಿಡಲಿಲ್ಲ. ಇವೆರಡೂಅವರಿಗೆ ಎರಡುಕಣ್ಣುಗಳಾಗಿಯೆ ಬೆಳೆದವು. ಶ್ರೀಗಳು ಮೊದಮೊದಲು ಒಂದು ಕೈ ಬರಹದ ಪತ್ರಿಕೆಯಲ್ಲಿ ಸುಂದರವಾದ ಅಕ್ಷರಗಳಿಂದ, ಬಂಧುರವಾದ ಕವನಗಳನ್ನು ರಚಿಸಿ ಅದನ್ನು ಸಾರ್ವಜನಿಕರ ಅವಗಾಹನೆಗೆ ತಂದುದು; ಶ್ರೀಗಳವರದ್ವಾದಶ ವರ್ಷದ ಬಾಲ್ಯ-ದಲ್ಲಿ ಬೆಳೆಯ ಸಿರಿ ಮೊಳಕೆಯಲ್ಲಿ ಎಂಬಂತೆ ಸಾಹಿತ್ಯ, ಸಂಘಟನೆ, ಶಿವಯೋಗ ಸಾಧನೆ ಮುಂತಾದವೆಲ್ಲ ಬಾಲ್ಯದಲ್ಲಿ ಅಂಕುರಿಸಿದವು ಹಾನಗಲ್ಲ ಕುಮಾರ ಮಹಾಸ್ವಾಮಿಗಳವರ ಕನಸು ನನಸಾಗುವ ಸಾಕಾರ ಸ್ವರೂಪವೆ ಮೈವೆತ್ತು ಬಂದಂತಾಗಿದ್ದಿತು. ಶ್ರೀಗಳವರ ಬಾಲ್ಯದ ಆಟ, ಅವರ ಸಾಹಿತ್ಯ ಪ್ರೇಮ, ನಿಸರ್ಗದ ನೋಟ, ಅವರ ಮಾಟ ಕೂಟಗಳನ್ನು ಕಂಡವರಿಗೆ ಇವು ಕಾರಣಿಕರೆಂದು ಸಹಜವಾಗಿಯೆ ವೇದ್ಯವಾಗುತ್ತಿದ್ದಿತು. ಅಂದಿನ ಭರವಸೆಗಳು ಅವರನ್ನು ಅಲ್ಲಮಪ್ರಭು ಸಂಪ್ರದಾಯದ ಜಗದ್ಗುರುಪೀಠಕ್ಕೇ-ರಿಸಿತು. ಮುಕ್ತಮನಸ್ಸು, ಔದಾರ್ಯ, ಸಮಾಜದ ಕಳಕಳಿ, ಕಾವ್ಯಾರಾಧನೆ, ಅಧ್ಯಾತ್ಮದ ಹಂಬಲ, ಸಾಧನೆ ಇವೆಲ್ಲವುಗಳಿಂದ ಅವರ ವ್ಯಕ್ತಿತ್ವ ಸಹಸ್ರಶೀರ್ಷ, ಸಹಸ್ರಾಕ್ಷರರಂತೆ ಬೆಳೆಯುತ್ತದೆ. ಜಗದ್ಗುರು ಪೀಠವನ್ನಲಂಕರಿಸಿದ ಮಹಾ ಶಿವಯೋಗಿಗಳು ನಮ್ಮ ದೇಶದ ಎಲ್ಲೆಯನ್ನು ದಾಟಿ ವಿದೇಶಕ್ಕೆ ಹೋಗಿ ವೀರಶೈವ ದರ್ಶನ, ಹಿಂದೂ ಸಂಸ್ಕೃತಿಗಳ ಪ್ರತ್ಯಕ್ಷ ನಿದರ್ಶನವಾಗಿ ತೋರಿ-ದರು. ಕೆಲವರಂತೂ ತುಂಬಿದ ಸಭೆಯಲ್ಲಿ ಇವರ ಗಂಭೀರವಾದ

ಶಾಂತಪ್ರಸನ್ನ ವ್ಯಕ್ತಿತ್ವವನ್ನು ಕಂಡು ನಮ್ಮ ಹಿಂದಿನ ಬುದ್ಧ, ಬಸವೇಶ್ವರಾದಿಗಳನ್ನು ಸ್ಮರಿಸಿಕೊಂಡರಂತೆ! ಇಂದಿಗೂ ಮೂರು-ಸಾವಿರಮಠಕ್ಕೆ ಹೋದರೆ ಹಿಂದಿನ ಜಗದ್ಗುರುಗಳವರ ಶಿಕ್ಷಣದ ಪರಂಪರೆಯನ್ನು ಮುಂದುವರಿಸಿಕೊಂಡು ಹೋದುದಲ್ಲದೆ ಇಂದು ನಾಡಿಗೆ ಅವಶ್ಯವಿದ್ದ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದರು. ಎಲ್ಲಿದ್ದರೂ, ಏನಾದರೂ, ಜಗದ್ಗುರುಗಳವರು ಸಾಹಿತ್ಯವನ್ನು ಕೈ ಬಿಡಲಿಲ್ಲ, ಶಿವಾನುಭವ ಮರೆಯಲಿಲ್ಲ, ಇಲ್ಲಿ ಪ್ರಕಟವಾಗು-ತ್ತಿರುವ ಚಿತ್ಸುಮನವೆ ಇದಕ್ಕೆ ನಿದರ್ಶನವಾಗಿದೆ.

ಚಿತ್ಸುಮನ ಎರಡುನೂರಾ ಮೂವತ್ತು ವಚನಗಳ ಸಂಗ್ರಹ. ಆದರಲ್ಲಿ ಷಟ್‌ಸ್ಥಲಗಳನ್ನು ಹೀಗೆ ಕಲ್ಪಿಸಬಹುದು :-

೧) ಈ ಪ್ರಪಂಚದ ಇರವು.
೨) ಗುರುವಿನ ನೆನಹು.
೩) ಸಾಧನೆಯ ಸ್ಥಿತಿ.
೪) ಸಿದ್ಧಿಯ ಹಂತ.
೫) ವ್ಯಷ್ಟಿ ಸಮಷ್ಟಿಗಳ ಐಕ್ಯ.
೬) ಪರಮಾನಂದದ ಸ್ಥಿತಿ.

ನಿಜ ಸುಖವೆಂಬುದು ಕನಸಿನ ಗಂಟಾಗಿಹುದಯ್ಯಾ
ಅರಿವಿನ ಇರವನರಿಯದೆ ಕೊರಗುತ್ತಲಿದ್ದೇನೆ
ತಾಪತ್ರಯದ ತಾಕಲಾಟದಿಂದ
ಬಸವಳಿದು, ಬಾಯಾರಿ, ಕಸಿವಿಸಿಕೊಳ್ಳುತ್ತಲಿದ್ದೇನೆ...

ಈ ಭಾವನೆಯಲ್ಲಿ ಜಗದ್ಗುರುತ್ವದ ಉಪಾಧಿ ದೂರ ಸರಿದಿದೆ. ಆತ್ಮದ ಹಂಬಲ ಪುಟನೆಗೆದು ನಿಂತಿದೆ. ಪೂಜನೆಗಳೆ ಇವು ಅಪಾರವಾಗಿದ್ದರೂ ನಿಜ ಸುಖವು ಅಲ್ಲಿಲ್ಲವೆಂಬುದರ ಅರಿವಾಗಿದೆ. ಅಂತೆಯೆ ನಿಜಸುಖವೆಂಬುದು ಕನಸಿನ ಗಂಟಾಗಿಹುದಯ್ಯಾ ಎಂದು ಉದ್ಗಾರ ತೆಗೆದಿರುವರು. ಇದು ಸಾಧಕನಲ್ಲಿ ಉಂಟಾಗುವ ಮೊದಲ ಸ್ಥಿತಿ ಇದ್ದು ಇರವಿನ ಬಗೆಗೆ ಅತೃಪ್ತಿ, ಅಸಮಾಧಾನ, ಕೊರತೆಗಳ ಭಾವನೆ, ಸಂವೇದನೆ. ಉಂಟಾಗದೆ ಹೋದರೆ ಅಲ್ಲಿ ಗತಿ ಇಲ್ಲ ಪ್ರಗತಿ ಇಲ್ಲ.ಚಿತ್ಸುಮನದ ಪ್ರಾರಂಭದ ವಚನಗಳಲ್ಲಿ ಸಾಧಕನ ಪ್ರಥಮ ಹಂತದ ಈ ಕೊರಗು ಸ್ಪಷ್ಟವಾಗಿ ಕೇಳಿಬರುತ್ತದೆ. ಬಸವಳಿದು. ಬಾಯಾರಿ, ಕಳವಳಗೊಳ್ಳುತ್ತಲಿದ್ದೇನೆ ಎಂಬ ನುಡಿಯಲ್ಲಿ ನಿಜವಾದ ಆರ್ತಧ್ವನಿ ಇದೆ. ಕೊನೆಗೆ ತರಳನ ತಪ್ಪು ಮನ್ನಿಸಿ ತಾತನು ಮೊಮ್ಮಗನನ್ನು ಅಪ್ಪಿಕೊಳ್ಳುವಂತೆ ನೀನೆನ್ನಪ್ಪಿಕೊಳ್ಳಬೇಕೆಂದು ಕರ್ತೃ ಗುರುಸಿದ್ಧೇಶನನ್ನು ಭಕ್ತಿಭಾವದಿಂದ ಪ್ರಾರ್ಥಿಸಿದ್ದಾರೆ. ಈ ಕಳವಳಕ್ಕೆ ಕಾರಣ ಮೋಹದ ಪಂಜರ ಮಾಯೆಯ ಬಂಧನವೆಂಬುದನ್ನು ಅರಿತಿರುವರು. ಮೋಹ ಮಾಯೆಗಳು ಪ್ರಪಂಚದಲ್ಲಿ ಯಾರನ್ನೂ ಬಿಟ್ಟಿಲ್ಲ. ಪ್ರಪಂಚಕರಿಗೆ ಒಂದು ರೀತಿಯಿಂದ ಕಾಡಿದರೆ ವೈರಾಗ್ಯಶೀಲರನ್ನು ಮತ್ತೊಂದು ರೀತಿಯಿಂದ ಕಾಡುತ್ತವೆ. ಬಂಧನ ಹರಿದು, ಆತ್ಮ ನಿತ್ಯಸುಖದಲ್ಲಿ ಲೋಲಾಡುವ ವರೆಗೆ ಈ ಮಾಯೆ ಇದ್ದೇ ಇರುತ್ತದೆ ಆಗ ಮಾತಿನ ಚಪಲತೆಗೆ ಮನ ಮೆಚ್ಚುತ್ತದೆ. ಮೈಮರೆಯುತ್ತದೆ. ವೇಷ ಭಾಷೆಯ ಮೋಡಿಗೆ ಮೋಸ

ಹೋಗುತ್ತದೆ. ಸಂಚು ತಿಳಿಯದೆ ಮಾತಿನ ಮಿಂಚಿಗೆ ಮನ ಮರಳಾಗುತ್ತದೆ. ಈಮಾತು ಜ್ಯೋತಿರ್ಲಿಂಗವಾಗಬೇಕೆಂಬುದು ಶ್ರೀಗಳವರ ಹಾರೈಕೆ. ತಮ್ಮ ಮನವನ್ನು ಪದರು ಪದರಾಗಿ ಹಿಂಜಿ ಹಿಂಜಿ ಲೋಕದ ಮುಂದೆ ಇಡುತ್ತಾರೆ. ಗೋಪುರವ ಕಟ್ಟಿಸಿದೆನೆಂದು ಗೌಪ್ಯ ಅಹಂಕಾರವೇತಕಯ್ಯಾ ಎಂದು ತಮಗೆ ತಾವೆ ಪ್ರಶ್ನಿಸುವರು. ಗೋಪುರದ ಸುತ್ತು ದೀಪಗಳಿರಬೇಕೆಂದು ರೂಪಕ ಕಾವ್ಯದಲ್ಲಿ ಅನುಭಾವದ ಆಳವನ್ನು ಬಿತ್ತರಿಸಿರುವರು. ಅದಿಲ್ಲದೆ ಮಾಡಿದರೆ ಗೋಪುರ ಗಾಳಿಗೋಪುರವೆಂದು ಎಷ್ಟು ಸ್ಫುಟವಾಗಿ, ಕಾವ್ಯಮಯವಾಗಿ ಹೇಳಿರುವರು! ಹೃದಯವೆಂಬ ಕಾಸಾರದಲ್ಲಿ ಮನೋವಿಕಾರವೆಂಬ ಮೀನಗಳಂತೆ ಈ ರೂಪಕ ವನ್ನು ಕವಿ ಸಂಪೂರ್ಣವಾಗಿ ವಿವರಿಸಿರುವರು. ಆ ಮೀನುಗಳು ಗಾಳವ ಬಿಟ್ಟರೆ ಹೊರಗೆ ಬರದಾಗಿವೆ, ಮನೋವಿಕಾರದ ಸ್ಥಿತಿ ಯನ್ನು ಇದಕ್ಕಿಂತಲೂ ಹೆಚ್ಚು ಸ್ಫುಟವಾಗಿ ಹೇಳಲು ಸಾಧ್ಯ ವಿಲ್ಲ. ಇದಕ್ಕೆಲ್ಲ ಕಾರಣ ಮೋಹ. ಆ ಮೋಹದಿಂದ ಮರೆವು ಆವರಿಸಿ ಸ್ಮೃತಿವಿಭ್ರಮ ಉಂಟಾಗುತ್ತದೆ. ತಾವಾರೆಂಬುದನ್ನು ಮರೆತು ಹೋಗುತ್ತದೆ. ಜೀವಿಗಳು ದೀಪದ ಹುಳುಗಳಂತೆ ಸಾಯುತ್ತವೆ. ಪ್ರಪಂಚದ ಈ ಕಷ್ಟಗಳನ್ನು ಕಂಡು ಕವಿಯ ಮನನೊಂದಿದೆ, ಬೆಂದಿದೆ. ಜೀವನ ಯಾತ್ರೆಯಲ್ಲಿ ನೊಂದು ಬೆಂದಿರುವೆನಯ್ಯಾ ಎಂಬ ಉದ್ಗಾರ ಇದಕ್ಕಾಗಿ ಬಂದಿದೆ. ಕಷ್ಟ ನಷ್ಟಗಳನ್ನು ಸಹಿಸಿರುವರು. ದಡವ ಮುಟ್ಟಿಸುವ ಅಂಬಿಗರು ನಡು ನೀರಿನಲ್ಲಿಕೈಬಿಟ್ಟುಹೋಗಿರುವರು. ಕರ್ತೃಗುರುಸಿದ್ಧೇಶನ

ಧ್ಯಾನವೆಂಬ ನೌಕೆ ದಡವನ್ನು ಮುಟ್ಟಬೇಕಾಗಿದೆ. ಆಶೆಯೆಂಬ ರಕ್ಕಸಿಯು ಗುರುವಿನ ಧ್ಯಾನ್ಯವನ್ನು ಬಿಡಿಸಿನಾಶಪಡಿಸುತ್ತಿಹುದು ಅದ ಕಂಡು ಮನ ಮರುಕಪಡುತ್ತಿಹುದು. ಮಂಜು ತುಂಬಿದ ಮುಂಜಾವದಂತೆ ಮನವು ಮಬ್ಬಾಗಿಹುದು. ಶಿವಧ್ಯಾನವೆ ಅದಕ್ಕೆ ತಾರಕವೆಂದು ಧ್ಯಾನಸಕ್ತರಾದರೆ ಮನವು ನಿಲ್ಲಲೊಲ್ಲದು. ಮನ- ಏವ ಮನುಷ್ಯಾನಾಂ ಕಾರಣಂ ಬಂಧ ಮೋಕ್ಷಃ. ಚಂಚಲವಾದ ಮನಸ್ಸನ್ನು ಹಿಡಿದು ನಿಲ್ಲಿಸಬೇಕೆಂಬುದೆ ಸಾಧಕನ ಆಶೆಯಾಗಿದೆ. ಎನ್ನ ಚಿತ್ತ ಬಿತ್ತಿಯ ಮೇಲೆ ನಿನ್ನ ಚಿತ್ರವನೊತ್ತದಿದ್ದರೆ ನಾನೆಂತು ಬದುಕುವೆಹೇಳಾ ಎಂದುಸದ್ಗುರುವನ್ನು ಕೇಳುವರು. ಈಗ ಬದುಕುವ ದಾರಿ ಹೊಳೆದಿದೆ. ಮನದ ಡೋಲಾಯ ಮಾನಸ್ಥಿತಿಅಳಿದಿದೆ. ಆರಂತಸ್ತಿನಮಹಾದ್ವಾರವ ಕಟ್ಟಿಸಿದೆನೆಂದು ಅರಿವುದ ಮರೆಯಿಸದಿರು ದೇವಾ, ಆರಳಿದು ಮೂರು ಕಳೆವ ಧೀರತನವ ಪಾಲಿಸಯ್ಯ ಎಂದು ಕೇಳುವರು. ಅರಿಷಡ್ವರ್ಗಂಗ- ಳನ್ನು, ಸತ್ವ, ತಮ, ರಜತ್ವಗುಣ ವಿಕೃತಿಯನ್ನು ಕಳೆವ ಧೀರತ- ನವನ್ನು ಪಾಲಿಸಬೇಕೆಂದು ಕೇಳಿಕೊಳ್ಳುತ್ತಾರೆ. ಭಕ್ತಿ ನಿಷ್ಠೆಯಾ ದುದರ ಕುರುಹು ಇದು. ಈಗ ಶಿವಪೂಜೆಯ ಅರ್ಥ ಸಾಧಕನಿಗೆ ವಿವರ ವಿವರವಾಗಿ ಹೊಳೆಯತೊಡಗಿದೆ. ಶಿವಪೂಜೆ ಮಾಡು ವೆನಯ್ಯ ಮನ ನಿಲ್ಲಲೆಂದು ಹೇಳಿ ಶಿವಪೂಜೆಯ ರಹಸ್ಯ ಆಡಂಬರಕ್ಕಲ್ಲ, ಮನಸ್ಸನ್ನು ಸ್ಥಿರವಾಗಿನಿಲ್ಲಿಸಲು, ವಿಷಯವನ್ನು ಗೆಲ್ಲಲು, ಭಕ್ತಿಯನ್ನು ಬಲಿಸಲು, ಲಿಂಗವನ್ನು ಆಲಿಸಲು, ಅತಿ

ಸುಂದರವಾದ ನಾಲ್ಕು ಮಾತುಗಳಲ್ಲಿ ಶಿವಪೂಜೆಯರಹಸ್ಯವನ್ನು ಬಿತ್ತರಿಸಿರುವರು. ಈ ವಿವರಣೆಯಲ್ಲಿ ಕೃತ್ರಿಮತೆ ಸೋಂಕಿಲ್ಲ. ಏಕೆಂದರೆ ಈ ಶಿವಪೂಜೆ ಅವರ ನಿತ್ಯ ಜೀವನದ ಉಸಿರು. ಆ ಉಸಿರು ಪರಿಮಳವಾಗಿ ಸೂಸುತ್ತದೆ. ಈ ಲಿಂಗದ ನೆನೆಹಿನ ಧ್ಯಾನದಲ್ಲಿ ಕಾಯಕವೆ ಕೈಲಾಸವೆಂದು ನಂಬಿ ಸದ್ಗುರುವಿನ ಸೇವೆಯಲ್ಲಿ ನಿರತರಾಗಿರುವರು. ಲೋಕದಲ್ಲಿ ಇದ್ದು ಇಲ್ಲದಂತಿ-ರುವ ಹಾದಿಯನ್ನು ಅರಸುತ್ತಿರುವರು. ಈ ಅಂತರಂಗದ ಸಾಧನೆ, ನಿರಂತರ ನಡೆದು ಹೊಯ್ದಾಟದ ಮನಕ್ಕೆ ಶಾಂತಿ ತರುತ್ತದೆ, ಆ ಪರಮಾನಂದದಲ್ಲಿ ಶರಣನು ಸುತ್ತಲಿನಸಮಾಜ-ವನ್ನು ನೋಡುತ್ತಾನೆ, ಅಲ್ಲಿ ಕಾಣುವ ಢಾಂಭಿಕತನ ಶ್ರೀಗಳವರ ಮನಸ್ಸಿಗೆ ವ್ಯಥೆಯನ್ನುಂಟು ಮಾಡಿದೆ. ಭಿಕ್ಷೆಯನ್ನು ಕೇಳಿದರೆ ಕೊಡಲೊಲ್ಲದು ಈ ಜನ, ಮೋಸದಿಂದ ಲಕ್ಷ ಲಕ್ಷ ಹಾಳು ಮಾಡುತ್ತಿರುವ ಹಣ ಸತ್ಪಾತ್ರ ಸಲ್ಲದು, ಲಿಂಗಪೂಜೆಗೆಹೊಲ್ಲ-ದೆಂದು ಸ್ಪಷ್ಟವಾಗಿ ನುಡಿದಿರುವರು. ಕಜ್ಜ ಎಸಗದೆ ಜಸವ ಬಯಸುತ್ತಿಹರನು ಕಂಡು; ಕಾಯಿ ಹಣ್ಣಾದರೇನಂತೆ ಸಿಹಿ ಇರದನ್ನಕ್ಕರ ಎಂದು ಕೇಳುವರು.

ಶ್ರೀಗಳವರಿಗೆ ಸಮಾಜ ಸೇವೆಯೆ ಲಿಂಗಪೂಜೆ, ಸಮಾಜ_ದೊಳಗಿನ ಕುಂದು ಕೊರತೆಗಳನ್ನು ಕಂಡು ಬಹಳನೊಂದಿರುವರು ತಲೆಗೊಂದುಪಕ್ಷವ ಕಟ್ಟಿ ಸಮಾಜಮಂದಿರವ ಸಂಹರಿಸುತ್ತಿಹರು ನೋಡಯ್ಯ ಎಂದು, ಪ್ರತಿಷ್ಠಾಭೂತದ ಬೆನ್ನು ಹತ್ತಿದವರನ್ನು

ಕುರಿತು ನುಡಿದಿರುವರು. ಜನ, ದಿನಕ್ಕೊಂದು ಸಂಪ್ರದಾಯ, ವಾರಕ್ಕೊಂದು ಪಕ್ಷ ಪಂಗಡ ಬದಲಾಯಿಸುತ್ತಿರುವದನ್ನು ಕಂಡು ಶಿವ ಸಮಾಜ ನಶಿಸುತ್ತಿಹುದು ಕಣ್ದೆರೆಯ ಬಾರದೆ ಎಂದು ಸಮಾಜ ಬಾಂಧವರನ್ನು ಕೇಳಿರುವರು. ಗುರು ವಿರಕ್ತರೆಂಬವರು ಸಮಾಜ ಪುರುಷರಿಗೆ ಎರಡು ಕಣ್ಣುಗಳೆಂದು ಹೇಳುವಲ್ಲಿ, ಕವಿಯ ಆದರ್ಶ, ಕಾವ್ಯ ಆದರ್ಶಗಳೆರಡೂ ತುತ್ತತುದಿಯನ್ನು ಮುಟ್ಟಿವೆ. ಈ ಕಣ್ಣುಗಳಿಗೆ ಪರೆ ಬಂದರೆ ಸಮಾಜವೆ ಅಂಧವಾಗುವದು. ಹೀಗಾಗಿದೆ ಈ ಗುರುವಿರಕ್ತರ ಕಲಹ. ನಾ ಹೆಚ್ಚು ನೀ ಹೆಚ್ಚು ಎಂಬುದು ಮಂತ್ರವಾಗಬಾರದೆಂದು ಎಚ್ಚರಿಕೆ ನೀಡಿರುವರು. ಸಮಾಜದ ಹಿತಚಿಂತನೆಗಳನ್ನೆಸೆದರೆ ಕಿರಿಯನೆ ಹಿರಿಯನಾಗುತ್ತಾನೆಂದು ತಿಳಿಸಿರುವರು.

> ಸಮಾಜವು ಒಡೆದ ಗಡಿಗೆಯಂತಾಗಿರುವದಯ್ಯಾ
> ಸಮಾಜವು ಬಲವಿಲ್ಲದ ರೋಗಿಯಂತಾಗಿರುವದಯ್ಯಾ
> ಸಮಾಜವು ತಂತಿ ಇಲ್ಲದ ವೀಣೆಯಂತಾಗಿರುವದಯ್ಯಾ...

ಎಂದು ಸಮಾಜದ ಸ್ಥಿತಿಯನ್ನು ಕಂಡು ಅದನ್ನು ತಿದ್ದಹೊರಟರೆ ಎಷ್ಟೋ ಸಲ ಸಮಾಜವು ಅದರ ಅಪಾರ್ಥವನ್ನು ಮಾಡಿಕೊಂಡುದನ್ನು ಕಂಡು ಅತ್ಯಂತ ಮಾರ್ಮಿಕವಾಗಿ ಚಿತ್ರಿಸಿರುವರು. ಮುಕ್ತಿ ಕಂಠಾಭರಣಕ್ಕೆ ಕಂಟಕ ಬಾರದಿರಲು ಶ್ರಮಿಸಿದರೆ ಜನ ಪಂಗಡ, ದ್ವೇಷ, ಸಾಧಿಸ ಹೊರಟಿರುವದನ್ನು ಕಂಡು ಊರು ಉಪಕಾರವರಿಯದು, ಹೆಣ ಶೃಂಗಾರವರಿಯದೆಂಬ ನಾಡ

ಗಾದೆಯನ್ನು ಹೇಳಿ ಶ್ರೀಗಳು ತಮ್ಮ ನಿಲುವನ್ನು ವ್ಯಕ್ತಪಡಿಸಿರು ವರು. ಇಡೀ ವಚನವು ಆ ಸನ್ನಿವೇಶದ ಪ್ರಖರತೆಯನ್ನು ಅವರ ಮನನೊಂದುಕೊಂಡುದುದನ್ನು ಸ್ಪಷ್ಟಪಡಿಸುತ್ತದೆ. ಇದಕ್ಕೆಲ್ಲ ವ್ಯಕ್ತಿದ್ವೇಷ, ವರ್ಗ ದ್ವೇಷಗಳಿಂದಸಮಾಜದ ಭಾವೈಕ್ಯ ಭಂಗ-ವಾಗುತ್ತಿರುವದನ್ನು ಕಂಡು ಶ್ರೀಗಳ ಮನನೊಂದುಕೊಂಡಿರು ವದು. ಸಮಾಜದ ಉದ್ಧಾರಕ್ಕಾಗಿಯೆ ಪ್ರೈವೆತ್ತ ಸಾಕಾರ ಶಿವಸ್ವರೂಪವಾಗಿರುವದರಿಂದ ಅವರಿಗೆ ಈ ನೋವು ನಲಿವು-ಗಳೆಲ್ಲ ಬಾಹ್ಯ ಉಪಾಧಿಯಾಗಿವೆ.

ಚಿತ್ಸುಮನದ ವಚನಗಳು ಸಾಹಿತ್ಯದೃಷ್ಟಿಯಿಂದಅತ್ಯಂತ ವೈಶಿಷ್ಟ್ಯಪೂರ್ಣವಾಗಿವೆ. ಕವಿತಾಶಕ್ತಿಗೆ ಕಲ್ಪನೆಯೊಂದೆಸಾಲದು ನೋಡಾ, ಅಂಗ ಸೌಂದರ್ಯಕ್ಕೆ ಅಲಂಕಾರವೊಂದು ಸಾಲದು ನೋಡಾ, ಧ್ಯಾನ ವಿವೇಚನೆಭಾವಂಗಳು ಕವಿತಾ ಶಕ್ತಿಗೆ ಪ್ರೇರಕ-ವಾಗಿಹವೆಂದು; ಕಾವ್ಯ, ಕಲ್ಪನೆ, ಆಲೋಚನೆ ಭಾವಗಳ ವಿದ್ಯುದಾಲಿಂಗನವೆಂಬ ವೃತವಾಕ್ಯವನ್ನುನುಡಿದಿರುವರು. ವಚನ ಸಾಹಿತ್ಯದ ರಹಸ್ಯವನ್ನು ತಿಳಿದುಕೊಂಡಿರುವರು. ವಚನ ಸಾಹಿತ್ಯವು ಆತ್ಮಾನಂದಕ್ಕಾಧಾರವೆಂದು ವಚನ ರಚನಾ ಸಾಗರ ದಲ್ಲಿ ಧುಮುಕಿರುವೆನಯ್ಯಾ ಎಂಬನುಡಿಯಲ್ಲಿವಚನ ಸಾಹಿತ್ಯದ ಉದ್ದೇಶವೇನೆಂಬುದನ್ನು ಅರಿತುಕೊಂಡಿರುವರು. ವಿಶಾಲವಾ-ಗಿದ್ದರೂ ಅದನ್ನು ಈಸಬೇಕೆಂಬ ಆಶೆಇರುವದನ್ನು ವ್ಯಕ್ತಪಡಿಸಿ

ರುವರು. ಆ ಸಾಗರದಲ್ಲಿ ಮುಳುಗಿ ಎದ್ದು ನೀಡಿದ ರತ್ನಗಳೇ ಚಿತ್ಸುಮನದ ವಚನಗಳು.

ಶ್ರೀಗಳವರ ಉಕ್ತಿಗಳಲ್ಲಿ ಕಾವ್ಯದ ಮಿಂಚು ಸದಾ ಝಳಪಿಸುತ್ತಿರುವದನ್ನು ಕಾಣಬಹುದಾಗಿದೆ.

೧) ಮಾನವತೆ ಇಲ್ಲದ ಬ್ರಹ್ಮಚರ್ಯ ಕಾನನದ ಕುಸುಮದಂತೆ, ಸಾಗರದ ಮೇಲಿನ ಮಳೆಯಂತೆ.

೨) ನಿರಹಂಕಾರವಿಲ್ಲದ ಪಾಂಡಿತ್ಯ ಹರಿಗಡೆವ ಉಗ್ಗಿನಂತೆ.

೩) ಮಾತು ಮಾಣಿಕ್ಯವಾದರೆ ಓತು ಬಂದ ಕತ್ತಲೆ ಸೋತು ಹೋದೀತು.

೪) ಪತಿತರನ್ನು ಪಡೆಯುವದೆ ಪರಮ ಧರ್ಮ.

೫) ಸಮಾಜವು ಒಡೆದ ಗಡಿಗೆ......

೬) ಬೇಡುವ ಧನ ಪರಹಿತಕಾಗಿರಬೇಕು.

೭) ಬೇಲಿ ಎದ್ದು ಹೊಲ ಮೇಯ್ದಲ್ಲಿ ಬೆಳೆ ಬರುವದೆಂತು

ಇಂತಹ ಮಾತುಗಳು ಕವಿಯ ಕಾವ್ಯ ಶಕ್ತಿಯನ್ನು, ಸಾಹಿತ್ಯ ಸೌರಭವನ್ನು ಸ್ಫುಟಗೊಳಿಸುತ್ತದೆ. ವೀರಶೈವ ಧರ್ಮದ ರಹಸ್ಯವನ್ನರಿತು ಅವರ ತತ್ವ ಆಚರಣೆಗಳನ್ನು ಚಿತ್ರಿಸಿರುವರು. ವಿಶ್ವಮಾನವ ಧರ್ಮವನ್ನರಿತು ಅದನ್ನು ಹೇಳಿರುವರು. ಚಿತ್ಸುಮನ ಮಾನವತೆಯ ಬಳ್ಳಿಗರಳಿದ ಮಂದಾರ ಪುಷ್ಪ,ದೇವತ್ವದಹಂದರವನ್ನು ಹತ್ತಿದ ದಿವ್ಯಪುಷ್ಪ.

"ಶ್ರೀ ಮೂಜಗಂ" ನಮ್ಮ ಮೂರುಸಾವಿರಮಠದ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳೆಂದು ಖ್ಯಾತನಾಮರಾಗಿ ವೀರಶೈವ ಸಮಾಜದ, ಕನ್ನಡ ನಾಡಿನ ಕಣ್ಮಣಿಯಾಗಿರುವರು. ಜಗದ್ಗುರು ಪೀಠದ ಸತ್-ಪರಂಪರೆಯನ್ನು ಸಾವಿರ ಮಡಿ ಹಿಗ್ಗಿಸಿ, ಸಮಾಜದ ಕಾರ್ಯ-ದಲ್ಲಿ ವಿಶೇಷ ಆಸಕ್ತಿಯನ್ನು ವಹಿಸಿ, ಅದಕ್ಕಾಗಿ ನಿರಂತರ ಪರಿ-ಶ್ರಮಿಸುತ್ತಿರುವರು. ಬಿಡುವಿಲ್ಲದ ಕಾರ್ಯದಲ್ಲಿ ಸಾಹಿತ್ಯ ಶಕ್ತಿನುಗ್ಗಿ ಮುಂದಕ್ಕೆ ಬರುತ್ತದೆ. ಅದರ ಫಲವಾಗಿ ಈ ವಚನ-ಗಳು ಬಂದಿವೆ. ಇಲ್ಲಿ ಅಧ್ಯಾತ್ಮದ ಹೊನಲಿದೆ, ಸಾಹಿತ್ಯದ ಪ್ರವಾಹವಿದೆ. ತತ್ವಜ್ಞಾನದ ಮಡುವಿದೆ, ಸಮಾಜ ವಿಮರ್ಶೆ-ಯ ಕಣವಿದೆ. ಇಂತಹ ಅನರ್ಘ್ಯರತ್ನಗಳನ್ನು ಸೂರೆಗೈದ ಜಗದ್ಗುರುಗಳವರ ದಿವ್ಯ ಸನ್ನಿಧಿಗೆ ಭಕ್ತಿಪುರಸ್ಸರ ಪ್ರಣಾಮ-ಗಳು,

ಡಾ॥ ಆರ್. ಸಿ. ಹಿರೇಮಠ.

★

# ನಮ್ಮ ನುಡಿ

ವಚನ ಬರೆಯಬೇಕೆಂಬಾಶೆ ಬಹುದಿನಗಳಿಂದ ಹಾಗೆಯೇ ಉಳಿದಿತ್ತು. ಅದು ಇದೀಗ ಫಲಿಸಿದಂತಾಯ್ತು. ಆದರಲ್ಲಿಯೂ ಇತ್ತೀತ್ತಲಾಗಿಸಾಮಾಜಿಕ ರಂಗದಲ್ಲಿ ಕಾಲಕಳೆಯುತ್ತಿರುವದರಿಂದ ಬರವಣಿಗೆಗೆ ಬಿಡುವಿಲ್ಲದಾಗಿದೆ. ಹದಿನಾಲ್ಕು ವರ್ಷಗಳ ನಂತರ ಮತ್ತೆ ಸಾಹಿತ್ಯ ಸರೋವರದಲ್ಲಿ ಈಸಲು ಪ್ರಾರಂಭಿಸಿದ್ದೇವೆ. ಇನಿತು ದಿನಗಳ ವರೆಗೆ ಶಿಲಾಸೌಧದ ನಿರ್ಮಾಣ ಕಾರ್ಯದಲ್ಲಿ ತೊಡಗಿರುವ ನಾವು ಇದೀಗ ಸಾಹಿತ್ಯ ಸೌಧದತ್ತ ಪಯಣ ಬೆಳಸಿದ್ದೇವೆ.

ಭಾವಕುಸುಮವನ್ನು ಅರಳಿಸಲು ವಚನವು ಮಹತ್ಸಾಧನ. ಹೃದಯಂದಂತರಂಗವನ್ನು ಜನಸಾಮಾನ್ಯರಿಗೂ ತಿಳಿಯಪಡಿಸಿ ಮಹದ್ವಿಚಾರವನ್ನು ತಿಳಿಭಾಷೆಯಲ್ಲಿರಿಸಿ, ಅಂತರ್ಭಾವಗಳನ್ನು ಆಳವಾಗಿ ವಿಚಾರಿಸಿ,ವಿವೇಚಿಸಿ,ಅನುಭವಿಸಿಬರೆಯುವದೇ ವಚನ ವಚನರಚನೆಗೆ ಹೆಚ್ಚಾಗಿ ಹೃದಯಬೇಕಾಗುತ್ತದೆ.ತೆರೆದ ಹೃದಯ ದಿಂದ ಬರೆಯದವಚನ ಬೋರ್ಗಲ್ಲ ಮೇಲೆ ನೀರೆರೆದಂತೆವ್ಯರ್ಥ. ಭಾಷೆಗಿಂತಲೂ ಭಾವಕ್ಕೆ ಹೆಚ್ಚು ಮಹತ್ವ ನೀಡಿದರೆ ವಚನಕ್ಕೆ ಸೊಬಗು. ನೋವು ನಲಿವುಗಳನ್ನು ಹಾಗು ಸಾಮಾಜಿಕ ಜೀವನದ ಚಿತ್ರವನ್ನು ಚಿತ್ರಿಸಲು ವಚನ ರಚನೆ ಬಹುಮುಖ್ಯವಾದುದು. ಆ ದೃಷ್ಟಿಯಿರಿಸಿ ವಚನ ರಚನೆಗೆ ಮನಸ್ಸು ಹಾಕಲಾಗಿದೆ. ಈ

"ಚಿತ್ಸುಮನ" ನಮ್ಮ ಪ್ರಪ್ರಥಮ ವಚನ ಸಂಕಲನ. ಇದರಲ್ಲಿ-ರುವ ಹಲಕೆಲವು ವಚನಗಳು ಈಗಾಗಲೇ "ಕರ್ಮವೀರ" 'ಪರಂಜ್ಯೋತಿ'ಮುಂತಾದ ಪತ್ರಿಕೆಗಳಲ್ಲಿ ಬೆಳಕುಕಂಡಿವೆ. ಅಂತ-ರ್ಗತವಿಚಾರಗಳನ್ನೊಳಗೊಂಡ ಈಚಿತ್ಸುಮನ(ವಚನಸಂಕಲನ) ದಲ್ಲಿ ಸಾಮಾಜಿಕ ಜನಜೀವನದತ್ತ ದೃಷ್ಟಿಹಾಯಿಸಲಾಗಿದೆ. ಸಾಧ್ಯವಾದಷ್ಟು ಷಟ್‌ಸ್ಥಲ ಸಿದ್ಧಾಂತದ ವಿವರಣೆಯುಳ್ಳ ವಚನ ಗಳನ್ನು ಅಲ್ಪಸ್ವಲ್ಪ ಬರೆಯಲಾಗಿದೆ.

ಮುಂದೆ ಮತ್ತೆ ಬರೆಯಲಿರುವ "ವಚನ ವಾರಿಧಿ"ಯಲ್ಲಿ ಸವಿಸ್ತಾರವಾಗಿ, ಸಿದ್ಧಾಂತಪರಿಪೂರ್ಣವಾಗಿಬರೆಯಬೇಕೆಂಬಾಶೆ ತುಂಬಿಕೊಂಡಿದ್ದೇವೆ. ಇದೀಗ ಕನ್ನಡಿಗರ ಕೈಯಲ್ಲಿ ಈ "ಚಿತ್ಸುಮನ"ವನ್ನು ಕೊಡಲಾಗಿದೆ. ಇದರಸದುಪಯೋಗವನ್ನು ವಾಚಕ ವೃಂದವು ತೆಗೆದುಕೊಳ್ಳಬಹುದೆಂದು ಆಶಿಸಲಾಗಿದೆ.

ದಿ. ೧೫-೨-೭೩
ಹುಬ್ಬಳ್ಳಿ. ಶ್ರೀಮೂಜಗಂ

★

# ಪ್ರಕಾಶಕರ ನುಡಿ

## (ದ್ವಿತೀಯ ಮುದ್ರಣ)

'ಚಿತ್ಸುಮನ' ಅಲ್ಪಾವಧಿಯಲ್ಲಿಯೆ ಪುನಃಮುದ್ರಣ ಗೊಂಡು ಪ್ರಕಾಶಗೊಳ್ಳುತ್ತಲಿರುವದು ಸಂತೋಷದ ಸಂಗತಿ ಯಾಗಿದೆ. ಸಮಕಾಲೀನ ವಚನ ಸಾಹಿತ್ಯಕ್ಕೆ ದೊರೆತಜನಪ್ರಿಯ ತೆಯೂ ಇದಾಗಿದೆ.

ಶ್ರೀ ಜಗದ್ಗುರು ಮೂರುಸಾವಿರಮಠದ ಗ್ರಂಥಮಾ- ಲೆಯು ಇಲ್ಲಿಯ ವರೆಗೆ ಸುಮಾರು ಐವತ್ತಕ್ಕೂ ಮಿಕ್ಕಿ ಸದ್- ಗ್ರಂಥಗಳನ್ನು ಪ್ರಕಟಿಸಿ ವೀರಶೈವ ಧರ್ಮ, ಸಾಹಿತ್ಯ, ಸಂಸ್ಕೃತಿ ಗಳಿಗೆ ಮಹದುಪಕಾರವೆಸಗಿದೆ. ಕಳೆದ ವರ್ಷ ಗ್ರಂಥಮಾಲೆ ತನ್ನ ಸುವರ್ಣಮಹೋತ್ಸವವನ್ನಾಚರಿಸಿತು. ಈಗ ಗ್ರಂಥ ಮಾಲೆಯ ಐವತ್ತಾರನೆಯ ಗ್ರಂಥ ಕುಸುಮವಾಗಿ ಹೊರಬರುವ 'ಚಿತ್ ಸುಮನ' ಶ್ರೀಮೂಜಗಂರವರ ಮೊದಲ ವಚನಸಂಗ್ರಹ. ಶ್ರೀ ಮೂಜಗಂ ಎಂಬುದು ಮೂರುಸಾವಿರಮಠದಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಸಂಕ್ಷಿಪ್ತ ರೂಪ, ಕಾವ್ಯನಾಮ. ವಚನ ಸಾಹಿತ್ಯವು ಕನ್ನಡದ ವಿಶಿಷ್ಟ ರಚನೆ. ಮಾನವನು ತನ್ನ ಆತ್ಮ ಸಾಕ್ಷಾತ್ಕಾರಕ್ಕಾಗಿ ಪಡುವ ಉತ್ಕಟವಾದ ಹಂಬಲ ಹಾಗೂ ಅದಕ್ಕಾಗಿ ನಡೆಸಿದ ಆತ್ಮನ ಹೋರಾಟವನ್ನು ಒಳಗೊಂಡುದುದು. ಬಿಂದುವಿನಲ್ಲಿ

ಸಿಂಧುಸಮಾನ ಅನುಭವವನ್ನು ಹಿಡಿದಿಡುವ ಸುಲಭವಾದ ಮಾಧ್ಯಮ. ಮುನ್ನಿನ ಪುರಾತನರಿಂದ ಹಿಡಿದು ಇಂದಿನ ಶ್ರೀ 'ಮಜಗಂ' ರವರೆಗೆ ಹರಿದು ಬಂದ ವಚನ ಗಂಗೆ ಕನ್ನಡದ ಬಹುಮೂಲ್ಯ ಆಸ್ತಿ. ವಿಶ್ವಕ್ಕೆ ಕನ್ನಡ ಕೊಟ್ಟ ಅಪೂರ್ವ ಕಾಣಿಕೆ.

ಚಿತ್‌ಸುಮನದ ಹೆಸರಿನಲ್ಲಿಯೇ ಗ್ರಂಥದ ಉಸಿರಡಗಿದೆ, ಇದರಲ್ಲಿ ಕಾಣುವುದು ಹೃತ್‌ಕಪಾಟೋದ್ಘಾಟ. ಇಲ್ಲಿಯ ವಚನಗಳು ಸಾಹಿತ್ಯ ಸೃಷ್ಟಿಗಾಗಿ ಬರೆದವುಗಳಲ್ಲ. ಬದುಕಿನ ಹೋರಾಟದಲ್ಲಿ ತಾವು ಅನುಭವಿಸಿದ ಅನುಭವಗಳ ಅಮರವಾಣಿ ಈ ಚಿತ್‌ಸುಮನ. ಅನುಭವ ಇರುವಲ್ಲಿ ಅಮೃತತ್ವ ಇದೆ. ಅಮೃತತ್ವವನ್ನು ಸವಿದವರು ಅಮರರು. ಚಿತ್‌ಸುಮನದಲ್ಲಿಯ ವಚನಗಳು ಪಾರಮಾರ್ಥಿಕ, ಲೌಕಿಕ, ಸಾಂಸ್ಕೃತಿಕ, ಸಾಹಿತ್ಯಿಕ ಸಂಪತ್ತಿನಿಂದ ಹಾಸುಹೊಕ್ಕಾಗಿವೆ. ಇಲ್ಲಿ ಬುದ್ಧಿಶ್ರೀ, ಭಾವಶ್ರೀ ಆತ್ಮಶ್ರೀ ಗಳ ತ್ರಿವೇಣಿ ಸಂಗಮ ಸಮನಿಸಿದೆ. ಬೆಳಗಿನಿಂದ ಬೈಗಿನವರೆಗೆ ಸದಾ ಸಾಮಾಜಿಕ ಕಾರ್ಯಗಳಲ್ಲಿ ಮಗ್ನರಾಗಿರುವ ಪೂಜ್ಯಪಾದರು, ತಮ್ಮ ಈ ಪ್ರಥಮ ವಚನ ಸಂಕಲನದಲ್ಲಿಯೇ ತಾವು ಯಶಸ್ವಿ ವಚನಕಾರರೆಂಬುದನ್ನು ತೋರಿಸಿ ಕೊಟ್ಟಿದ್ದಾರೆ.

ಈ ಗ್ರಂಥಕ್ಕೆ ಒಪ್ಪವಾದ ಮುನ್ನುಡಿ ಬರೆದು ಕೊಟ್ಟ ಡಾ॥ ಆರ್. ಸಿ. ಹಿರೇಮಠರು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಮುಖ್ಯಸ್ಥರು; ಸದ್ಯಕ್ಕೆ ಕರ್ನಾಟಕ

ವಿಶ್ವವಿದ್ಯಾಲಯದ ಕುಲಪತಿಗಳು. ಬಿಡುವಿಲ್ಲದ ಬೆವಹಾರಿಗರು ಬದುಕು ಬರಹಗಳಲ್ಲಿ ಶರಣರ ನಿಲುವನ್ನು ಅಳವಡಿಸಿಕೊಂಡ-ವರು. ಹಾಗೂ ಪೀಠಿಕೆ ಬರೆದು ಕೊಟ್ಟ ಪೂರ್ಣತ್ವಕಾರರಾದ ಡಾ॥ ಕೆಳದಿ ಪಟ್ಟಾಧ್ಯಕ್ಷರು ಅವರನ್ನು ನೆನೆಯದೆ ಇರಲಾರೆವು.

ಅಲ್ಪಾವಧಿಯಲ್ಲಿಯೆ ಈ ಗ್ರಂಥ ಸುಂದರವಾಗಿ ಮುದ್ರ-ಣಗೊಳ್ಳಲು ಕಾರಣರಾದ ಪರಂಜ್ಯೋತಿ ಅಚ್ಚುಕೂಟದವರಿಗೆ ಅಭಿನಂದನೆಗಳು,

ದಿ. ೧೫-೯-೭೭
ಹುಬ್ಬಳ್ಳಿ.

ಪ್ರಕಾಶಕರು.

# ಪೀಠಿಕೆ

ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣರೂಪವಾದ ಪರಶಿವನ ನಾಮ ರೂಪ ಕ್ರಿಯೆಯೊಂದಿಗೆ ಅವನ ಪಂಚ ಲಕ್ಷಣ ಸಮನ್ವಿತವಾದಂಥ ಸ್ಥಾನಾಪನ್ನ-ನಾಮವಾದ "ಭಘ್ರಾಲತಾ ಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರ" ಎಂಬ ಮುದ್ರಿಕೆ-ಯಿಂದ ವಚನಗಳನ್ನು ರಚಿಸಿರುವವರು "ಶ್ರೀ ಮೂ.ಜ.ಗಂ." ಅವರು.

ಇವರು ರಚಿಸಿದ ಸಹಸ್ರಾರು ವಚನಗಳಿರುವ ಬೃಹದ್ ಗ್ರಂಥವಾದ "ವಚನ ವಾರಿಧಿ" ಗ್ರಂಥದಲ್ಲಿಯ ಒಂದು ಭಾಗ ಮಾತ್ರವಾಗಿದೆ, ಈ ಚಿತ್‌ಸುಮನ.'

'ಚಿತ್‌ಸುಮನ' ವೆಂದರೆ ವಚನ ಸಂಕಲನ ಎಂಬುದಾಗಿ ವಚನ ಸಾಹಿತ್ಯದ ಸಾಲಿನಲ್ಲಿ ಸೇರಿರುವ ಒಂದು ಗ್ರಂಥವಾಗಿದೆ ಯಾದರೂ ಈ ವಚನಕಾರರಾದ 'ಶ್ರೀ ಮೂ.ಜ.ಗಂ.' ಅವರು ಈ ಗ್ರಂಥಕ್ಕೆ "ಚಿತ್‌ಸುಮನ" ಎಂಬ ನಾಮಕರಣ ಮಾಡಿರು. ವುದು ಸಕಾರಣವಾಗಿದೆ : 'ಚಿತ್ತಂ ತು ಚೇತೋ ಹೃದಯಂ ಹೃನ್ ಮಾನಂಸಂ ಮನಃ,ಎಂಬಲ್ಲಿಯ 'ಮನ'ವುಳ್ಳ ವ್ಯಕ್ತಿಯು ಯಮ ನಿಯಮಾದಿ ಸಾಷ್ಟಾಂಗ ಯೋಗದ ಸಹಾಯದೊಂದಿಗೆ ಸಹಕರಿಸಿದ ಶಿವಯೋಗದ ಸಾಧನೆಯಿಂದ'ಸುಮನ'ನಾಗುತ್ತಾ-

ನೆಂದೂ, ಅವನು ಚಿತ್‌ಸ್ವರೂಪನೆಂದೂ 'ಚಿತ್‌ಸುಮನ' ಎಂಬ ನಾಮವನ್ನು ಈ ವಚನ ಸಂಕಲನ ಗ್ರಂಥದ ಅಂಕಿತನಾಮವನ್ನು ಅನ್ವರ್ಥಕಗೊಳಿಸಿದ್ದಾರೆ. ಇಲ್ಲಿಯ ಚಿತ್‌ಸುಮನ ಶಬ್ದದಲ್ಲಿ ಚಿತ್+ಸುಮನ ಎಂಬುದು ಗೋಚರವಾಗುತ್ತಿದೆ. ಇದು ಸತ್ ಚಿತ್ ಆನಂದ ನಿತ್ಯ ಪರಿಪೂರ್ಣ ಲಕ್ಷಣಗಳಲ್ಲಿ ಎರಡನೆಯದು.

ಚಿತ್‌ದ ಚಿಂತನೆಯಿಂದ ಸುಮನರಾದವರು ಅಂದರೆ ಚಿತ್‌ದಿಂದ ಚಿತ್-ಸ್ವಾಸ್ಥ್ಯ ಪಡೆದವರಾಗಬೇಕಾದರೆ ಈ 'ಚಿತ್‌ಸುಮನ' ಗ್ರಂಥದಲ್ಲಿಯ ವಚನಗಳಂತೆ ಆಚಾರ-ವಿಚಾರ-ವುಳ್ಳವರಾಗಬೇಕು.

ಈ ಆಚಾರ-ವಿಚಾರ ಪ್ರಚೋದಕಗಳಾದ ವಚನಗಳ ರಚನೆ ಮಾಡಿರುವ "ಶ್ರೀ ಮೂಜಗಂ" ಅವರು ತಮ್ಮ ವಚನ ರಚನೆಯ ಮುಂಚೆ ಮಾಡಿದ ತಮ್ಮ ಸಾಧನೆಯನ್ನು ತಮ್ಮ ಒಂದು ವಚನದಲ್ಲಿ ಸ್ಮರಿಸಿಕೊಂಡಿದ್ದಾರೆ:- 'ಶ್ರೀ ಮೂಜಗಂ' ಅವರು ಜನಿಸಿದ್ದು, ಹಾನುಗಲ್ ಕುಮಾರೇಶನ ವರದಿಂದ; ಒಟುವಾಗಿ ತ್ರಿಕರಣದಿಂದ ಓದಿದ್ದು, ಶ್ರೀಮದ್ ವೀರಶೈವ ಶಿವಯೋಗ ಮಂದಿರದಲಿ; ಶಿವಪೂಜೆ-ಶಿವಾನುಭವದ ಪರಿಯನರಿದು ಕೊಂಡದ್ದು, ಶ್ರೀಮದ್‌ವೀರಶೈವ ಶಿವಯೋಗಮಂದಿರದ ಯತಿಗಳಿಂದ; ತಾವು ಕಲಿತ ವಿದ್ಯೆಯನ್ನು ಕಾಶೀ ಕ್ಷೇತ್ರದೊಳು ಬೆಳೆಸಿಕೊಂಡದ್ದು, ವಿಜಯ ಮಹಾಂತೇಶನ ಹಾಗೂ ಸದ್‌ಭಕ್ತರ

ಸಹಾಯದಿಂದ ; ಮತ್ತು ಇವರು ಜಗದ್ಗುರು ಪೀಠವನ್ನೇರಿದ್ದು ಕರ್ತೃ ಜಗದ್ಗುರು ಗುರುಸಿದ್ಧೇಶ್ವರನ ಹಾಗೂ ಗುರುಸಿದ್ಧ-ಕುಮಾರನ ಕರುಣೆಯಿಂದ. ಇಂಥ 'ಶ್ರೀ ಮೂಜಗಂ' ಅವರು ಅದೇ ವಚನದ ಕೊನೆಯಲ್ಲಿಯ ಪ್ರತಿಜ್ಞೆಯಿದು: "ಭೂಲತಾ ಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ ನಿರಂತರ ಸಮಾಜ ಸೇವೆಯ ಮಾಡುತಿರುವೆನಯ್ಯಾ ತವ (ಗುರುಸಿದ್ಧೇ-ಶ್ವರನ) ಕೃಪಾ ವಿಶೇಷದಿಂದ"

ಅಂತೆಯೆ 'ನಿರಂತರ ಸಮಾಜ ಸೇವೆಯ ಮಾಡುತ್ತಿರುವ' ಶ್ರೀ ಮೂಜಗಂ ಇವರ "ವಚನವಾರಿಧಿ"ಯ ಇತರ ಭಾಗಗಳೂ ಪುನಃ ಪುನಃ ಹೆಚ್ಚಿನ ಆವೃತ್ತಿ ಹೊಂದಿ "ಚಿತ್‌ಸುಮನ"ದಂತೆ ಜನಸಾಮಾನ್ಯರ ಚಿತ್ತ-ಸುಮನಗಳಾಗಲಿ.

ಡಾ॥ ಕೆಳದಿ ಪಟ್ಟಾಧ್ಯಕ್ಷರು M. A. Ph. D.
ರಾಜಗುರು ಹಿರೇಮಠ, ಕೆಳದಿ

★

ನೀನಿರುವೆ ಜಗದ್ಗುರು ಸಾರ್ವಭೌಮ !
ನೀನಿರುವೆ ಸಾಧಕರಿಗೆ ಧ್ಯಾನ ಧಾಮ !!
ನೀನಿರುವೆ ನಿರ್ವಿಕಲ್ಪ ಸಮಾಧಿಸ್ಥ ತಾತ !
ನೀನಿರುವೆ ಇಷ್ಟಾರ್ಥ ಸಿದ್ಧಿ ಪ್ರದಾತ !!
ನೀನಿರುವೆ ಹುಬ್ಬಳ್ಳಿ ಪುರಕೆ ಅಧಿಪತಿಯು !
ನೀನಿರುವೆ ಸದ್‌ಭಕ್ತರಿಗೆ ಗತಿಯು ಮತಿಯು !!
ನೀನಿರುವೆ ಚಿತ್‌ಕಲಾ ಪರಿಪೂರ್ಣನು !
ನೀನಿರುವೆ ಶೂನ್ಯ ಸಿಂಹಾಸನಾಧೀಶನು !!
ನೀನಿರುವೆ ಸರ್ವ ಧರ್ಮದ ಜನಕೆ ಸಂಜೀವನ !
ನೀನಿರುವೆ ಸಮನ್ವಯದ ತತ್ತ್ವಕೆ ಸಂಭಾವನ !!
ನೀನಿರುವೆ ನಮ್ಮ ಪಾಲಿಗೆ ಪರಂಜ್ಯೋತಿ !
ನೀನಿರುವೆ ಶಿವಯೋಗ ಮೆರೆದ ವಿಭೂತಿ !!

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

ನೀನೆನ್ನ ಹೃದಯ ಸಿಂಹಾಸನದಲ್ಲಿ ಮಂಡಿಸಿರುವ
ಸನ್ಮೂರ್ತಿ ! ಚಿನ್ಮೂರ್ತಿ !!

ಕರೆವರು ಕೆಲವರು ನಿನ್ನನು ಹುಚ್ಚನೆಂದು,
ಕರೆವರು ಕೆಲಬರು ನಿನ್ನನು ಸಿದ್ಧನೆಂದು;
ಕರೆವರು ಕೆಲವರು ಸಿದ್ಧ ಗುರುವೆಂದು,
ಕರೆವರು ಕೆಲಬರು ಗುರುಸಿದ್ಧನೆಂದು;
ನಾನಿನ್ನೆಂತು ಕರೆಯಲಿ, ಗುರುದೇವಾ !

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,

ನಾ ನಿನ್ನ ಕರೆವೆನು;
ಹಗಲಿರುಳು ನನ್ನ ಮನದಲ್ಲಿ ಮನೆ ಮಾಡಿಕೊಂಡಿರೆಂದು!

ಮಾನವ ಕೋಟಿಗೆ ನೀನೆ ಕಲ್ಪತರು, ನೋಡಾ !
ಭವರೋಗದಿಂದ ಬಳಲುವ ಜನತೆಗೆ
ಭವರೋಗ-ವೈದ್ಯನಾಗಿರುವೆ, ನೋಡಾ!
ನಿತ್ಯವೂ ನಿನ್ನ ಭಕ್ತಿಯಿಂ ಪೂಜಿಸಿ,
ಚಿತ್‌ಪ್ರಕಾಶವೆಂಬ ಭಸ್ಮವ ಧರಿಸಿ,
ಚಿತ್‌ಕರಣಂಗಳೆಂಬ ಸುಮನಂಗಳ
ಸುರಿಸುತಿಹರಯ್ಯಾ !
ಸುಜ್ಞಾನವೆಂಬ ದೀಪವ ಬೆಳಗಿ,
ಓಂಕಾರವೆಂಬ ಘಂಟೆಯ ಬಾರಿಸಿ,
ಜ್ಞಾನ–ತೀರ್ಥವ ಬಯಸುತಿಹರಯ್ಯಾ !!

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಬಸವಾ ನಿನ್ನ ದಯದಿಂದ
ವೀರಶೈವ ಧರ್ಮವು ವಿನೂತ್ನ ಯೋಜನೆಯಲ್ಲಿ
ವಿಕಸಿತವಾಗಿ ವಿವರ್ಧನೆಗೊಂಡಿದೆ, ನೋಡಾ !
ಬಸವಾ, ನಿನ್ನ ಕೃಪೆಯಿಂದ
ಅಷ್ಟಾವರಣಗಳು ಅಂಗವಾಗಿ
ಅಲೌಕಿಕ ಪರಿಣಾಮವ ತೋರುತಿವೆ, ನೋಡಾ;
ಬಸವಾ, ನಿನ್ನ ಕರುಣೆಯಿಂದ
ಪಂಚಾಚಾರಂಗಳು ಪ್ರಾಣವಾಗಿ
ಪರಮ ಪುರುಷಾರ್ಥಕ್ಕೆ ಕಾರಣವಾಗಿವೆ, ನೋಡಾ;
ಬಸವಾ, ನಿನ್ನ ಅನುಗ್ರಹದಿಂದ
ಷಟ್‌ಸ್ಥಲಂಗಳು ಆತ್ಮವಾಗಿ
ಷಟ್‌ಸ್ಥಲ ಮಹಿಮೆಯ ಉಗ್ಗಡಿಸುತಿವೆ, ನೋಡಾ;
ಬಸವಾ, ನಿನ್ನ ಅಂತಃಕರುಣದಿಂದ
ಗುರು ಜಂಗಮರು ಸಂಪೂಜ್ಯರಾಗಿ
ಗುಣಾತಿಶಯವ ಬೀರುತಿಹರು, ನೋಡಾ;
ಬಸವಾ, ನಿನ್ನ ಕಾರುಣ್ಯದಿಂದ
ಲಿಂಗವು ಸರ್ವಾಂಗ ಲಿಂಗವಾಗಿ
ಲಿಂಗದ ಕಳೆ ಅಪೂರ್ವವಾಗಿ ಬೆಳಗುತ್ತಿದೆ. ನೋಡಾ;
ಇಂತಪ್ಪ ಕಾರಣಿಕ ಕಾರುಣ್ಯಮೂರ್ತಿ
ಬಸವನ ಮರೆತು ಮೆರೆಯುವವರಮೆಚ್ಚ

ನಮ್ಮ ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಸಸಿವಾಳದಲಿ ಹುಟ್ಟಿ
ಕಲ್‌ಬೆಟ್ಟವನು ಮುಟ್ಟಿ
ಘೋರ ತಪವನು ತಟ್ಟಿ
ಷಡ್ ವೈರಿಗಳ ಮೆಟ್ಟಿ,
ಬಾಲ ಶಿವಯೋಗಿಯಾದನಯ್ಯಾ !
ಕರಡೀಶನಲಿ ನಿಂದು,
ಅಮರ ವಿದ್ಯೆಗೆ ಸಂದು,
ಆಶೆ ಆಮಿಷ ಕೊಂದು,
ವಿರತಿ ಮಾರ್ಗಕೆ ಬಂದು
ಆತ್ಮಶ್ರೀಯನು ಸಂಪಾದಿಸಿದನಯ್ಯಾ ! !
ಚಿತ್ತರಗಿ ಪೀಠವನೇರಿ
ಬಸವ ತತ್ತ್ವವ ಬೀರಿ
'ಮಂದಿರ'ಕೆ ಸ್ಥಳ ತೋರಿ
ಭಕ್ತರಿಗೆ ಸುಖ ಕೋರಿ
ಬೆಳಗಿನೊಳು ಮಹಾಬೆಳಗಾದನಯ್ಯಾ !!!
ಚಿತ್ತರಗಿ ಶ್ರೀವಿಜಯ ಮಹಾಂತೇಶನಿರವಿದು, ಕೇಳಿರೋ!

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಕಾಮಾದಿಗಳ ಜಯಿಸಿದ ಮಹಾ ವೀರ,
ನಿಯಮಾದಿಗಳ ಪಾಲಿಸಿದ ಪರಮ ಧೀರ ;
ವೈರಾಗ್ಯ ಶಿಖರವೇರಿದ ಪಾವನ ಮೂರ್ತಿ,
ಶಾಪಾನುಗ್ರಹ ಶಕ್ತಿ ಪಡೆದ ಚಿನ್ಮೂರ್ತಿ ;
ಚಿತ್ತರಗಿ ಚಿಜ್ಜ್ಯೋತಿಯಾಗಿ,
ಗುರುಗಳಿಗೆ ಮಹಾ ಗುರುವಾಗಿ ಮೆರೆದ
ಶ್ರೀ ವಿಜಯ ಮಹಾಂತೇಶನ ಮಹಿಮೆ
ಅಪಾರವಾದುದು, ನೋಡಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೭

ನುಡಿಗಲಿಸಿದ ನಮ್ಮ ಕುಮಾರ
ನಡೆಗಲಿಸಿದ ನಮ್ಮ ಕುಮಾರ
ಶೀಲ ಸಂಸ್ಕೃತಿಯನುಳಿಸಿದನು ನಮ್ಮ ಕುಮಾರ ;
ಶಿವಯೋಗಮಂದಿರವ ಸ್ಥಾಪಿಸಿದನಯ್ಯಾ
ಶಿವಯೋಗದನುಭವವ ರೂಪಿಸಿದನಯ್ಯಾ,
ವಿರತಿ ಶಿಖಾಮಣಿ ಸುಕುಮಾರ
ಇಂತಪ್ಪ ಹಾನಗಲ್ ಕುಮಾರನ ಮರೆತು,
ಕಂಡಂತೆ ನಡೆವವರ ಕಂಡು ನಗುವನಯ್ಯಾ

ನಮ್ಮ ಭೂಮಿಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಸಪ್ತ ಶರಧಿಯೊಳು ಜನಿಸಿ
ಸಪ್ತ ವ್ಯಸನಗಳನಳಿಸಿ
ಸರ್ಪಭೂಷಣನೊಲಿಸಿ
ಹಾವೇರಿ ಹುಕ್ಕೇರಿ ಮಠದಧಿಪತಿಯಾದ
ಶಿವಬಸವನ ವ್ಯಕ್ತಿತ್ವ
ಅಗಾಧವಾಗಿಹುದು ನೋಡಾ !
ಶಿವಯೋಗ ಶಕ್ತಿಯು ಪಡೆದು
ಶಿವಯೋಗ ನಿಲಯಕೆ ದುಡಿದು
ಶಿವಯೋಗಾನಂದದೊಳಿರ್ದು
ಶಿವಯೋಗಿವರೇಣ್ಯನಾಗಿ ಮೆರೆದ
ಶಿವಬಸವನ ಹೆದ್ದಾರಿ
ನಮ್ಮೆಲ್ಲರಿಗೆ ಕೈದೀವಿಗೆ, ನೋಡಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಜನಿಸಿದೆನಯ್ಯಾ ನಾನು
ಹಾನಗಲ್ ಕುಮಾರೇಶನ ವರದಿಂದ ;
ವಟುವಾಗಿ ಓದಿದೆನಯ್ಯ,
ಶ್ರೀಮದ್ ವೀರಶೈವ ಶಿವಯೋಗ ಮಂದಿರದಲಿ
ತ್ರಿಕರಣದಿಂದ ;
ಶಿವಪೂಜೆ ಶಿವಾನುಭವದ ಪರಿಯನರಿದುಕೊಂಡೆನಯ್ಯಾ
ಶ್ರೀಮದ್‌ವೀರಶೈವಶಿವಯೋಗಮಂದಿರದಯತಿಗಳಿಂದ;
ವಿಧ್ಯಾಧ್ಯಯನವ ಬೆಳೆಸಿಕೊಂಡೆನಯ್ಯಾ
ಕಾಶೀ ಕ್ಷೇತ್ರದೊಳು ; ವಿಜಯ; ಮಹಾಂತೇಶನ,
ಸದ್‌ಭಕ್ತರ ಸಹಾಯದಿಂದ ;
ಜಗದ್ಗುರು ಪೀಠವನೇರಿರುವೆನಯ್ಯಾ
ನಿನ್ನ, ಗುರುಸಿದ್ಧ-ಕುಮಾರನ ಕರುಣೆಯಿಂದ.

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ

ನಿರಂತರ ಸಮಾಜ ಸೇವೆಯ ಮಾಡುತಿರುವೆನಯ್ಯಾ
ತವ ಕೃಪಾ ವಿಶೇಷದಿಂದ.

## ೧೦

ತನುವೆಂಬ ತೋಟದಲಿ
"ಚಿತ್‌ಸುಮನ" ಅರಳುತ್ತಿಹುದು, ನೋಡಾ ;
ವಿಷಯೇಂದ್ರಿಯಂಗಳೆಂಬ ಭ್ರಮರಂಗಳು
ಬಂಡುಣ್ಣಲು ಹಾರಿ ಬರುತ್ತಿಹವು, ನೋಡಾ !
ಷಡೂರ್ಮಿಗಳೆಂಬ ಹರಿಣಂಗಳು
ಹೂ ಹರಿಯಲು ಓಡಿ ಬರುತ್ತಿಹವು, ನೋಡಾ !
ಅಷ್ಟ ಮದಂಗಳೆಂಬ ಕಾಡು ಕೋಣಂಗಳು
ಹೂದೋಟ ಮುರಿಯಲು
ಹವಣಿಸುತ್ತಿಹವು, ನೋಡಾ !
ತ್ರಿಮಲಗಳೆಂಬ ಹುಳುಗಳು
ಅಲರಿನೆಸಳು ಕಡಿಯಲು
ಧಾವಿಸುತ್ತಿಹವು ನೋಡಾ !
ಷಡ್ವೈರಿಗಳೆಂಬ ಕೋತಿಗಳು
ಹಣ್ಣು ತಿನ್ನಲು ಗುಂಪುಗೂಡಿ
ಬರುತ್ತಿಹವು ನೋಡಾ!
ಅದು ಕಾರಣ,
ವಿವೇಕವೆಂಬ ಬೇಲಿಯ ಹಚ್ಚಿ
ಸುಜ್ಞಾನವೆಂಬ ಚಪ್ಪರ ಹಾಕಿ
ಓಡಿ ಬರುತ್ತಿರುವ ವೈರಿಗಳನೋಡಿಸಿ
'ಚಿತ್‌ಸುಮನ'ವನು ಸಂರಕ್ಷಿಸಿ

ಸಲಹುವುದು ನಿನ್ನ ಧರ್ಮವೆಂದು
ನಿನ್ನನೇ ಮೊರೆ ಹೊಕ್ಕಿರುವೆನಯ್ಯಾ

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೧೧

ಬಗೆಯ ಹೂಬಳ್ಳಿಯೊಳು
ಆತುಮದ ಕೋಗಿಲೆ ಕೂಗುತ್ತಿಹುದು, ನೋಡಾ!
ಧ್ಯಾನದಾ ತನಿರಸದ ಸವಿಯ
ಬಯಸುತ್ತಿಹುದು, ನೋಡಾ!
ಭಾವ ಸಮಾಧಿಯಲ್ಲಿದ್ದು
ಆತ್ಮ-ದೀಪ್ತಿಯ ಪಡೆವಾಸೆ, ನೋಡಾ !
ನನ್ನೀ ಮುದ್ದು ಕೋಗಿಲೆ
ನಿತ್ಯವೂ ನಿನ್ನತ್ತ ಹಾರುವಂತೆ ಕರುಣಿಸಾ !

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೧೨

ಹುಬ್ಬಳ್ಳಿ ಪೇಟೆಯೊಳು
ವಜ್ರ ವೈಢೂರ್ಯಂಗಳ ಕೊಳ್ಳಲು
ಬಂದಿರುವೆನಯ್ಯಾ !
ಸುತ್ತೆಲ್ಲ ತಿರು-ತಿರುಗಿ
ನಾವು ರೂಪೀ ಧನವನ್ನು ಬಿಚ್ಚಿಡಲು
ತಂದಿರುವೆನಯ್ಯಾ !
ಇಂತಿರುವ ಪೇಟೆಯೊಳು
ನಾವೀರ್ವರು ಒಂದಾದರೆ,
ಬಡವಂಗೆ ಭಾಗ್ಯ ಬಂದತ್ತಾಯಿತ್ತಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೧೩

ಮೋಹದ ಕಾಳ್ಗಿಚ್ಚಿನಲಿ ಬಿದ್ದು,
ಪಂಚೇಂದ್ರಿಯಂಗಳು ಕಳವಳಿಸುತ್ತಿಹವು, ನೋಡಾ !
ಸಂಮೋಹ ಭೂತವು ಬೆಂಬತ್ತಿ
ದಟ್ಟಡವಿಗೆ ದಬ್ಬುತ್ತಿಹುದು, ನೋಡಾ !
ವ್ಯಾಮೋಹ ಶಾರ್ದೂಲವು ಬಾಯ್‌ದೆರೆದು ನಿಂತು
ನುಣ್ಣನ್ನ ಬಾಳನ್ನು ನುಂಗುತ್ತಿಹುದು, ನೋಡಾ !
ಇದು ಕಾರಣ,
ಬಂದ ಕ್ಲೇಶಂಗಳನಳಿಸಿ, ಎನ್ನನುಳುಹಿಕೊಳ್ಳು,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಮೋಹವು ಧೃತಿಗೆಡಿಸುತ್ತಿಹುದಯ್ಯಾ,
ಮೋಹವು ಕೃತಿಗೆಡಿಸುತ್ತಿಹುದಯ್ಯಾ,
ಮೋಹವು ಗತಿ-ಮತಿಯಿಲ್ಲದಂತೆ
ತಿರುಗಿಸುತ್ತಿಹುದು, ನೋಡಯ್ಯಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೧೫

ಸಾಕಾಯ್ತು, ಈ ಜೀವನಕೆ
ಸಮಾಜ ಸೇವೆಯ ಚಿಂತನೆ !
ಬೇಕಾಯ್ತು ನನಗೀಗ
ನಿನ್ನ ಧ್ಯಾನದ ಚಿಂತನ ! !
ಸರ್ವರ ಸಹಕಾರ ಸ್ನೇಹ ಹಸ್ತವಿಲ್ಲದೆ
ಸಮಾಜ ಸುಧಾರಣೆ ಗೈಯುವುದೆಂತು, ಹೇಳಾ?
ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

# ೧೬

ಜೀವನ ವ್ಯೋಮದಲ್ಲಿ
ಕಾರ್ಮೋಡಗಳು ಕವಿಯುತಿಹವು, ನೋಡಯ್ಯಾ!
ಬಗೆ-ಬಗೆಯಾಗಿ ಬಂದು,
ಬೆಳಕಿಗೆ ಅಡ್ಡಯಿಸುತಿಹವು, ನೋಡಯ್ಯಾ !
ಈ ಅರುಣ ಕಿರಣಂಗಳು
ನಿನ್ನನ್ನೇ ಬೆಳಗುವಂತೆ ಕೃಪೆದೋರಾ,

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ತಾಪತ್ರಯದೊಳು
ಬಳಲಿ ಬೆಂದಿಹೆನಯ್ಯಾ,
ಕೋಪಾದಿ ವಿಕಾರಂಗಳು ಕಾಡುತ್ತಿಹವಯ್ಯಾ,
ಆಶಾ ಪಾಶದಿಂದ ಘಾಸಿಯಾಗಿಹೆನಯ್ಯಾ,
ಈ ಕಷ್ಟಗಳನೆಲ್ಲ ಕಡೆಹಾಯಿಸಿ,
ಜ್ಞಾನ ದೃಷ್ಟಿಯನಿತ್ತು
ಭಕ್ತಿ ಕೋಶದಲ್ಲಿರಿಸಾ !

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೧೮

ಸಾಮಾಜಿಕ ರಂಗದಲಿ ಓಡಾಡಿ
ಬೇಸತ್ತಿಹುದು ನೋಡಾ, ಈ ಮನ !
ಸಿಹಿ ಕಹಿಗಳನನುಭವಿಸಿ
ಅರತ ಕೆರೆಯಂತೆ ಆಗಿಹುದು ನೋಡಾ, ಈ ಮನ !
ಸಹಕಾರ ಸಂಘಟನೆಗಳ ಸವಿ ನೀರಿಲ್ಲದೆ,
ಸಮಾಜ ವೃಕ್ಷವು ಒಣಗುತ್ತಿಹುದು, ನೋಡಾ !
ನಿನ್ನ ಕಾರುಣ್ಯವ ಕರುಣಿಸಿ,
ಬುದ್ಧಿಯ ಉದಕವನೆರೆದು
ಸಲಹಬಾರದೆ, ಅಯ್ಯಾ !!

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಮೋಹದ ಪಂಜರದೊಳಗೆ ಸಿಲುಕಿ,
ತರಹರಿಸಿ ತಳಮಳಗೊಳ್ಳುತ್ತಿಹೆನಯ್ಯಾ !
ಮಾಯಾ–ಬಂಧನವ ಬಿಡಿಸಿ,
ಆಧ್ಯಾತ್ಮಿಕ ಆಕಾಶದಲ್ಲಿ ಹಾರಾಡುವಂತೆ
ಪ್ರೇರೇಪಿಸಯ್ಯಾ !
ನಿನ್ನನೇ ನೆನೆಯುತಿರುವೆನಯ್ಯಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ದೇಶ್ವರಾ.

# ೨೦

ಹದಿನಾಲ್ಕು ಸಂವತ್ಸರಗಳು
ಹದಿನಾಲ್ಕು ದಿನಗಳಂತೆ ಉರುಳಿದುವು, ನೋಡಾ !
ಸಾಹಿತ್ಯ–ತರು ಬೆಳೆಯದೆ,
ಜೀವವಿರಿಸಿಕೊಂಡು ನಿಂತಿಹುದು, ನೋಡಾ !
ಧೀ-ವಿವೇಚನೆಗಳ ನೀರೆರೆಯದೆ,
ಸಹಕಾರ–ಪ್ರೋತ್ಸಾಹನೆಗಳ
ಸಿಹಿ ನೀರನು ಚಿಮುಕಿಸುತ್ತಿಹೆವು, ನೋಡಾ!
ಸಾಹಿತ್ಯ ಸಂವರ್ಧನೆಯು ಸಮಾಜ ಸೇವೆಗೆ
ಕಾರಣವಾಗಿದೆಯಲ್ಲದೆ,
ಬೇರೆ ಮತ್ತೇನುಂಟು, ಹೇಳಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೨೧

ಶಿಲಾ ಸೌಧದ ಸೃಷ್ಟಿ ಬೇಡಾಯಿತು, ನೋಡಾ:
ಸಾಹಿತ್ಯ ಸೌಧದ ನಿರ್ಮಾಣದತ್ತ ಮನವೆಳಿಸಿದೆ, ನೋಡಾ
ಶಬ್ದ-ಭಾವ-ಕಲ್ಪನೆಗಳೆ
ಇದಕೆ ಕಡೆದ ಕಲ್ಲುಗಳು, ನೋಡಾ.
ನಿರ್ಮಿಸುತ್ತ ನಡೆದಂತೆ
ಶಿಲ್ಪಿಯ ಕಲೆ ಕಳೆಗೊಂಡು,
ಬೆಳಗುವುದು, ನೋಡಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೨೨

ಸಾಹಿತ್ಯಾರಾಧನೆಯನು
ವೈ ಮನಗೂಡಿಸಿ ಮಾಡಲೆಳಸಿಹುದು,
ನೋಡಾ ಈ ಮನ
ಸಾಹಿತ್ಯ ಮಂದಿರವನು
ಹೃದಯ ಸಂಭೂತಿಯೊಡನೆ ಕಟ್ಟಲೆಳಸುತ್ತಿಹುದು,
ನೋಡಾ ಈ ಮನ !!
ಭಾವ ವೈಭವದ ಗೋಪುರವನು ಕಟ್ಟಿ
ಮೆರೆಯಿಸಲೆಳಸಿಹುದು,
ನೋಡಾ ಈ ಮನ !
ನಿಜಾನಂದದ ಶಿಖರವನು, ಇರಿಸಿ
ಶಿವ ಸುಖವ ಹೊಂದಲೆಳಸಿಹುದು,
ನೋಡಾ ಈ ಮನ !!

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಮಾತಿನ ಚಪಲತೆಗೆ ಮೆಚ್ಚಿ
ಮೈ ಮರೆತೆನಯ್ಯಾ !
ಮನದ ಕುಹಕತನವನರಿಯದೆ
ಮನ ಸೋತೆನಯ್ಯಾ !
ಮೋಹಕ ವೇಷ-ಭಾಷೆಯ ಮೋಡಿಗೆ
ಮೋಸಹೋದೆನಯ್ಯಾ
ಸಂಚು ತಿಳಿಯದೆ, ಮಾತಿನ ಮಿಂಚಿಗೆ
ಮರುಳಾದೆನಯ್ಯಾ !
ಎಲ್ಲೆಲ್ಲೂ, ಮಾತಿನ ಮಲ್ಲರು
ಆತ್ಮೀಯತೆಯ ಕರುಳಿಲ್ಲದ ಸಾವಿರ ನುಡಿ
ಹುರುಳಿಲ್ಲದ ಬೀಜದಂತೆ
ಜೊಳ್ಳು ಕಾಣಯ್ಯಾ!

ನಮ್ಮ ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ನಿಜ ಸುಖವೆಂಬುದು ಕನಸಿನ ಗಂಟಾಗಿಹುದಯ್ಯಾ :
ಅರಿವಿನ ಇರವನರಿಯದೆ, ಕೊರಗುತ್ತಲಿದ್ದೇನೆ !
ತಾಪತ್ರಯದ ತಾಕಲಾಟದಿಂದ
ಬಸವಳಿದು ಬಾಯಾರಿ ಕಸವಿಸಿಗೊಳ್ಳುತ್ತಲಿದ್ದೇನೆ !
ಇದು, ನಿನ್ನಡಿಯ ಕಾಣಲು,
ಕಾಲ್ತೊಡಕಾಗಿಹುದು ! ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ

ತರಳನ ತಪ್ಪು ಮನ್ನಿಸಿ
ತಾತನು ತನ್ನತ್ತ ಕರೆದು ತಬ್ಬಿಕೊಳ್ಳುವಂತೆ,
ನಿನ್ನತ್ತ ಕರೆದು ತಬ್ಬಿಕೊಳ್ಳದಿರುವೆಯಾ ?

## ೨೫

ಹಸನಾದ ಭೂಮಿಗೆ ಕಸುವಿನ ಬೀಜ ಬಿತ್ತಿದೊಡೆ,
ಅದರ ಸೊಬಗಿನ ಪರಿಯು, ನೋಡಾ !
ಅದಕೆ ಕಾಲ ಕಾಲಕ್ಕೆ ಮಳೆ ಸುರಿಯುತಿದ್ದೊಡೆ,
ಅದರ ಸೊಗಸಿನ ಸಿರಿಯು, ನೋಡಾ !
ಹೃದಯವೆಂಬ ಹೊಲದೊಳಗೆ
ಸದ್ಗುಣವೆಂಬ ಬೀಜ ಬಿತ್ತಿದರೆ
ಅದರ ಫಲ ರುಚಿಯ ಬಣ್ಣಿಸಲೆಂತಯ್ಯ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೨೬

ಓಡುವ ಮನಸಿಗೆ ಬೇಡಿಯು ಹಾಕದಿರೆ,
ಮನಸಿನ ಮೋಡಿ ತಪ್ಪಲಾರದು, ನೋಡಾ !
ಓಡುವ ಕುದುರೆಗೆ ಕಡಿವಾಣವಿರದಿರೆ,
ಒಡೆಯನ ಮಾತು ಕೇಳಲಾರದು, ನೋಡಾ !
ಇದು ಕಾರಣ,
ಒಡೆಯ ನೀನು ವಿರತಿ–ವಿವೇಕಗಳನಿತ್ತು
ಸಲಹಬಾರದೆ ?

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಒಳಿತು ಕೆಡಕಿನ ಅರಿವಿದ್ದರೇನು ?
ಮತ್ತೆ ಮತ್ತೆ ಓಡುತಿಹುದು, ನೋಡಾ ಈ ಮನ !
ಘನ ಸುಖವ ಪಡೆವುದಿದ್ದರೇನು ?
ಸುತ್ತೆಲ್ಲ ತಿರುಗುತ್ತಿಹುದು, ನೋಡಾ ಈ ಮನ !
ಕಪ್ಪುರ ಡಬ್ಬಿಯೊಳಿಹ ಕಪ್ಪುರವ ಹೊರಗಿಟ್ಟರೇನು ?
ವಾಸನೆ ಹೋಗದಂತಿಹುದು, ನೋಡಾ !
ನಿನ್ನ ನೆನಹೆಂಬ ಪಾಶದಿಂದ ಕಟ್ಟಿ ಕಟ್ಟಿ,
ಪರಮಾನುಭವವೆಂಬ ಬೋಧೆಯ ಕೊಟ್ಟು,
ಕರುಣಾಮೃತವನುಣಿಸಿ
ಕಾಪಾಡಯ್ಯಾ !
ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಪಂಜರದ ಗಿಳಿಯು ವನಾಂತರವ ನೆನೆವಂತೆ
ಮನವಿದು ವಿಷಯದ ಕಡೆ ವಿಹರಿಸುತ್ತಿರುವುದಯ್ಯಾ !
ಮನವಿದು ಅತ್ತಿತ್ತ ಚಲಿಸುತ್ತಿರುವುದಯ್ಯಾ !
ಮಾಯಾ ಬಂಧನವ ಬಿಡಿಸಿ,
ನಿರ್ವಾಣಯೆಯ ದಾರಿ ಹಿಡಿಸಿ
ಕಾಯಯ್ಯಾ,

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೨೯

ನಾನೆಂಬುದು ಕಾಯಗುಣ ;
ನೀನೆಂಬುದು ದೇವ ಗುಣ.
'ನಾ' ಸತ್ತು "ನೀನಾ"ದಾಗ
ಆ ಬೆಳಗ ಬಣ್ಣಿಸಲೆಂತು ?

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಗೋಪುರವ ಕಟ್ಟಿಸಿದೆನೆಂದು
ಗೌಪ್ಯಾsಹಂಕಾರವೇತಕಯ್ಯಾ?
ಗೋಪುರದ ಸುತ್ತೆಲ್ಲ ದೀಪಗಳಿರದಿರೆ,
ಗಾಳಿ ಗೋಪುರವಾದಂತಾಯಿತ್ತಯ್ಯಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಹೃದಯವೆಂಬ ಕಾಸಾರದೊಳು
ಮನೋವಿಕಾರಂಗಳೆಂಬ ಮೀನಂಗಳು
ಅತ್ತಿತ್ತ ಅಲೆದಾಡುತ್ತಲಿಹವು, ನೋಡಾ !
ಮೇಲೊಮ್ಮೆ ನೋಡುವವು;
ಕೆಳಗೊಮ್ಮೆ ಮುಳುಗುವವು
ಇದೇ ಅವುಗಳ ಪರಿಯಾಗಿದೆ, ನೋಡಾ !
ಚಿತ್ರ ವಿಚಿತ್ರ ಮೀನಂಗಳು
ಹಾರಾಡುತಿಹವೊ ? ಹೋರಾಡುತಿಹವೊ !
"ತಿಮಿ-ತಿಮಿಂಗಿಲನ್ಯಾಯ"
ಸಬಲರು ದುರ್ಬಲರ ನುಂಗುವರು, ನೋಡಾ !
ದಾರಕ್ಕೆ ಕಟ್ಟಿ, ಗಾಳವ ಬಿಟ್ಟರೆ,
ಬಾಯಿಗೆ ಬರಲೊಲ್ಲವು ನೋಡಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,

ಮನೋವಿಕಾರಂಗಳ ಮಾಣಿಸಿ,
ಮನದಲ್ಲಿ'ಮೀನ್‌ಕಣ್' ಮಿನುಗುವಂತೆ ದಯದೋರಾ!

೩೨

ಮೋಹದಿಂದ ಮರೆವು ಆವರಿಸಿ
ಸ್ಮೃತಿ ವಿಭ್ರಮವುಂಟಾಗುವುದಲ್ಲದೆ,
ಅರೆ-ಹುಚ್ಚರಂತೆ ಗತಿಗೆಡುವರಯ್ಯಾ !
ತಾವಾರೆಂಬುದ ಮರೆತು
ವಿಷಯ ಸಂಸಾರದ ಬೇಗೆಗೆ ಸಿಲುಕಿ,
ದೀಪದ ಹುಳುಗಳಂತೆ ಸಾಯುತ್ತಿಹರಯ್ಯಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಈ ಜೀವನ-ಯಾತ್ರೆಯಲಿ
ನೊಂದು ಬೆಂದಿರುವೆನಯ್ಯಾ,
ಕಷ್ಟನಷ್ಟಗಳನೆಷ್ಟೋ ಸಹಿಸಿರುವೆನಯ್ಯಾ !
ಆ ದಂಡೆಯ ಮುಟ್ಟಿಸುವ ಅಂಬಿಗರು
ನಡು ನೀರಲಿ ಕೈ ಬಿಟ್ಟು ಹೋಗಿರುವರಯ್ಯಾ !
ಕೃತ್ರಿಮ ಪ್ರೇಮವ ತೋರುವ ಹಿರಿಯರು
ಮತ್ಸರಾಗ್ನಿಯೊಳು ಸುಮ್ಮನೆ ಬೇಯುತಿಹರಯ್ಯಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,
ನಿನ್ನ ಧ್ಯಾನ-ಬಲವೆಂಬ ನೌಕೆಯು
ಎಡರು-ತೊಡರೆಂಬ ತೆರೆಗಳು ತಾಕದಂತೆ-
ಎನ್ನ ಕರೆದೊಯ್ಯುತಿಹುದು, ನೋಡಯ್ಯಾ !

ಈ ಜೀವನವೆಂಬುದು ಮಹಾ ಸಾಗರವಯ್ಯಾ,
ಅದರಾಳವನಳೆವುದು ಕಠಿಣ ಕಷ್ಟವಯ್ಯಾ !
ತೆರೆಗಳು ಬಂದು ಅಪ್ಪಳಿಸುತ್ತಿಹವಯ್ಯಾ !
ನೀರ್‌ಗುರುಳೆಗಳು ಕಣ್‌ಮುಚ್ಚಿ ತೆರೆವಂತೆ,
ಕ್ಷಣದಲ್ಲಿ ಕಣ್‌ಮರೆಯಾಗುತ್ತಿಹವಯ್ಯಾ !
ಈ ಸಾಗರದ ಸಕಲ ಸಿಹಿ-ಕಹಿಯನುಂಡು
ಈಸಿ-ಈಸಿ ಬಲು ಸೋತಿರುವೆನಯ್ಯಾ !
ಸಾಗರದಾಚೆಯ ತೀರವ ಮುಟ್ಟಿಸಲು
ನಿನ್ನನೆ ಅಲ್ಪರಿದು ಬೇಡುತಿರುವೆನಯ್ಯಾ,

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಕೆರೆಯ ದಂಡೆಯಲಿರುವ ಕರಡಕಲ್ಲು,
ಮೇಲೊಂದು ಕರಿಯ ಬಣ್ಣದ ಹಕ್ಕಿ
ಕರೆಯುತಿಹುದು, ನೋಡಯ್ಯಾ !
ಕರಿಗೊಂಡ ಕರಿ ಪಕ್ಷಿ
ಆರು ವರ್ಣವ ತೋರಿ
ಹಾರಾಡುತಿಹುದು ನೋಡಯ್ಯಾ !

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೩೬

ಸ್ರಕ್–ಚಂದನಾದಿ ವಿಷಯಂಗಳು
ಮನುಜರನು ಮರವೆಯಲಿ ತಿರುಗಿಸುತಿಹವಯ್ಯಾ !
ಆಶೆಯೆಂಬ ರಕ್ಕಸಿಯು
ನಿನ್ನ ಧ್ಯಾನವ ಬಿಡಿಸಿ
ನಾಶಪಡಿಸುತ್ತಿಹಳಯ್ಯಾ !
ಮಾಯಾ–ಮರೀಚಿಯೊಡನೆ ಓಡುವರ ಕಂಡು
ಮನ ಮರುಕಪಡುವುದಯ್ಯಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಮಂಜು ತುಂಬಿದ ಮುಂಜಾವದಂತೆ
ಮನವು ಮಬ್ಬಾಗಿಹುದು, ನೋಡಾ !
ಧ್ಯಾನವೆಸಗಲು ಕುಳಿತರೆ
ಮನವು ನಿಲ್ಲಲೊಲ್ಲದು, ನೋಡಾ !
ತ್ರಾಣವಿಲ್ಲದ ರೋಗಿಯಂತೆ
ಮನದ ಪರಿಯಾಗಿಹುದಯ್ಯಾ !
ಎನ್ನ ಚಿತ್ತ-ಭಿತ್ತಿಯ ಮೇಲೆ
ನಿನ್ನ ಚಿತ್ರವನೊತ್ತದಿದ್ದರೆ,
ನಾನೆಂತು ಬದುಕುವೆ, ಹೇಳಾ ?

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೩೮

ಅಂತರಂಗದಿರವನರಿಯದೆ ದೂಷಿಸುತ್ತಿಹರ ಕಂಡು !
ಮನ ನೊಂದಿತ್ತಯ್ಯಾ !
ಹಣ್ಣಿನ ರುಚಿಯು ನೋಡದೆ
ಆ ಹಣ್ಣಿನ ಬಣ್ಣವ ನೋಡಿದರೇನು,
ಸವಿ ದೊರೆಕೊಳ್ಳುವುದೆ ?

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

# ೩೯

ಕಾರ್ಯವ ನೋಡಿ ಹರುಷ ಪಡಬೇಕಲ್ಲದೆ,
ಮತ್ಸರಿಸುವದೇತಕಯ್ಯಾ ?
ಅಲ್ಲ ಸಲ್ಲದ ನುಡಿಗಳನಾಡಿ
ಕುತ್ಸಿತರಾಗುವುದೇತಕಯ್ಯಾ ?
ಬೆಂಕಿಯ ಬಾಯಿಗೆ ರವದಿಯು ತುರುಕಿದಂತೆ
ಮತ್ಸರಾಗ್ನಿಗೆ ಮನವನ್ನಿತ್ತರೆ,
ಆತ್ಮ ಶಾಂತಿಯೆಲ್ಲಿಯದಯ್ಯಾ ?

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ದೂಷಿಸುವವರು ದೂಷಿಸಲಿ,
ಅದು ಅವರ ಕರ್ಮವಯ್ಯಾ !
ಸ್ತುತಿಸುವವರು ಸ್ತುತಿಸಲಿ,
ಅದು ಅವರ ಧರ್ಮವಯ್ಯಾ !
ಕುಗ್ಗಿ ಕರ್ತವ್ಯ ಬಿಡದಂತೆ,
ಹಿಗ್ಗಿ ಹಮ್ಮು ಪಡದಂತೆ
ಕರುಣಿಸಿ ಕಾಪಾಡಯ್ಯಾ,

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ದೇಶ್ವರಾ.

ಸಂಪತ್ತೆಂಬುದು ಆಪತ್ತು, ನೋಡಾ ;
ಸಂಪತ್ತು ಹೆಚ್ಚಿದಂತೆ
ಕಾಯುವ ಚಿಂತೆ ಹೆಚ್ಚುವುದಯ್ಯಾ !
ಸಂಪತ್ತು ಹೆಚ್ಚಿದಂತೆ
ಶಾಂತಿಯ ಬಾಗಿಲು ಮುಚ್ಚುವುದಯ್ಯಾ !!
ಸಂಪತ್ತು ಅವಗುಣಕ್ಕೆ ಆಹ್ವಾನ, ನೋಡಾ
ಅದು ಕಾರಣ, ಭೌತಿಕ ಸಂಪತ್ತಿಗೆ ಬಾಯ್ದೆರೆಯದೆ,
ಆತ್ಮ ಸಂಪತ್ತನ್ನು ಆರ್ಜಿಸಿಕೊಂಡರೆ,
ಕಾಡುವ ವೈರಿಗಳ ಕಾಟ ತಪ್ಪುವುದಯ್ಯಾ,

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಕಾಡುವವರು ಕಾಡಲಿ !
ಬೇಡುವವರು ಬೇಡಲಿ !!
ಓಡುವವರು ಓಡಲಿ !!!
ನೀಡುವವರು ನೀಡಲಿ !
ತೀಡುವವರು ತೀಡಲಿ !!
ಕೂಡುವವರು ಕೂಡಲಿ !!!

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,

ನಿನ್ನಡಿಯ ಪಿಡಿಯುವುದೊಂದೆ, ಸದಾ
ನನ್ನ ಸ್ಮರಣೆಯಲ್ಲಿರಲಿ.

ತೆಗಳಿ ತೆಗಳಿ ಬಾಯಿ ಕೆಡಿಸಿಕೊಂಡು,
ಪಾಪದ ಮಡುವಿನಲ್ಲಿ ಮುಳುಮುಳುಗಿ ಏಳುತಿಹರಯ್ಯಾ
ಹಲ ಕೆಲವರು !
ಮತ್ಸರಾಗ್ನಿಯೊಳು ಬೇಯುತಿಹರ ಕಂಡು,
ಮನ ಬಲು ಕಳವಳಗೊಳ್ಳುತಿಹುದಯ್ಯಾ !
ಪಾಪದರಿವು ಮನದಲ್ಲಿದ್ದರೆ,
ಈ ಪರಿ ಕುತ್ಸಿತ ಭಾವನೆ ಬರುವುದುಂಟೇನಯ್ಯಾ ?
ಚಿನ್ನದೊಡವೆಗೆ ಮಣ್ಣೆರಚಿದರೆ,
ತನ್ನ ಬಣ್ಣವ ಬಿಡುವುದುಂಟೇನಯ್ಯಾ?

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಕೇರಿ ಶುಚಿಯಾಗಿರಲು
ಕಿರಿ–ನಿಕರವಿರಬೇಕಯ್ಯಾ !
ಹೃದಯ-ಕಲ್ಮಷ ನಿವಾರಿಸಲು
ನಿಂದಕರಿರಬೇಕಯ್ಯಾ !!

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

'ಶ್ರೇಯಾಂಸಿ ಬಹು-ವಿಘ್ನಾನಿ' ಎಂಬಂತೆ,
ಪ್ರಗತಿಯತ್ತ ಸಾಗಿದವರನು
ಅಡೆತಡೆಗಳು ಬಂದು ಆವರಿಸುವವಯ್ಯಾ !
ನಡೆವರಿಗೆ ಕಲ್‌ಮುಳ್ಳು ತಾಗುವುದಲ್ಲದೆ,
ಕುಳಿತವರಿಗೆ ತಾಗುವುದೇನಯ್ಯಾ !!
ವಿಘ್ನದ ಪರ್ವತ ಶ್ರೇಣಿ ಎದುರು ಬಂದರೂ
ಧೈರ್ಯಗುಂದದ ಧ್ಯಾನಬಲವ ನೀಡಿ,
ರಕ್ಷಿಪುದು ನಿನ್ನ ಧರ್ಮವಯ್ಯಾ,

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

# ೪೭

ಅತ್ತಿತ್ತ ಹರಿದಾಡುತ್ತಿಹುದು ನೋಡಾ, ಈ ಮನ !
ಕತ್ತೆತ್ತಿ ನೋಡುತ್ತಿಹುದು ನೋಡಾ, ಈ ಮನ ! !
ಮನಬಂದಂತೆ ಕುಣಿ-ಕುಣಿವ ಮಂಗನಂತೆ
ಆಳಿಸುತ್ತಿಹುದು ನೋಡಾ, ಈ ಮನ ! ! !
ಎನ್ನ ಈ ಮನವ ನಿನ್ನತ್ತ ಹರಿವಂತೆ ಹರಸಿ,
ಎನ್ನನುಳುಹಿಕೊಳ್ಳಾ,

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೪೭

ಆರಂತಸ್ತಿನ ಮಹಾ ದ್ವಾರವ ಕಟ್ಟಿಸಿದೆನೆಂದು
ಆರರಿವುದ ಮರೆಯಿಸದಿರು, ದೇವಾ !
ಆರಳಿದು ಮೂರ್ ಕಳೆವ ಧೀರತನವ ದಯಪಾಲಿಸಯ್ಯಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

# ೪೮

ಶಿವ ಪೂಜೆ ಮಾಡುವೆನಯ್ಯಾ
ಮನ ನಿಲಲೆಂದು ;
ವಿಷಯ ಗೆಲ್ಲಲೆಂದು.
ಶಿವ ಪೂಜೆ ಮಾಡುವೆನಯ್ಯಾ
ಭಕ್ತಿ ಬಲಿಯಲೆಂದು ;
ನೀನೊಲಿಯಲೆಂದು.
ಶಿವ ಪೂಜೆ ಮಾಡುವೆನಯ್ಯಾ
ಜನ ಏಳಲೆಂದು ;
ಎದ್ದು ಬಾಳಲೆಂದು !

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೪೯

ಬಿಡುವಿಲ್ಲದಿಹ ಜೀವನದೊಳು
ನಿನ್ನ ನೆನೆವುದು ಕಡು ಕಷ್ಟ, ಕಾಣಯ್ಯಾ !
"ಕಾಯಕವೆ ಕೈಲಾಸ"ವೆಂದು ನಂಬಿ
ನಿನ್ನ ಸೇವೆಯ ಮಾಡುತಿಹೆನಯ್ಯಾ ! !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಮಳೆ-ಮಳೆಯೆಂದು ಜನ ಬಳಲುತಿಹರು, ನೋಡಾ !
ಮಳೆಯಾಗದೆ, ಬದುಕುವುದೆಂತು, ದೇವಾ ?
ಮಕ್ಕಳ ಅಜ್ಞಾನವ ಕಂಡು ಕೋಪಿಸಿರುವೆಯಾ ?
"ನಡೆವರು ಎಡಹುವರಲ್ಲದೆ,
ಕುಳಿತವರು ಎಡಹುವರೆ ?"
ಮಕ್ಕಳ ತಪ್ಪನು ತಂದೆಯು ಮನ್ನಿಸುವಂತೆ
ದಯಾ-ಘನಾ, ನೀನು ಮನ್ನಿಸದಿರುವೆಯಾ ?
ಮಳೆ ಸುರಿಸಿ,
ಬೆಳೆ ತರಿಸಿ,
ಕಳೆಯಿತ್ತು ಕಾಪಾಡಯ್ಯಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಇದ್ದೂ ಇಲ್ಲದಂತೆ ಇರಬೇಕು, ನೋಡಾ
ಈ ಪ್ರಪಂಚದೊಳಗೆ !
ಕಾರ್ಯ ಮಾಡಿ ತೋರಿಸಲು ಮುಂದಾದರೆ,
ಹೊಗಳಿಕೆ ತೆಗಳಿಕೆಗಳ ಹೊರೆ ಹೊರಲು
ಸಿದ್ಧರಿರಬೇಕು, ನೋಡಾ
ಈ ಪ್ರಪಂಚದೊಳಗೆ !!

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೫೨

ಭಿಕ್ಷೆಯನು ಕೇಳಿದರೆ ಕೊಡಲೊಲ್ಲರು
ನೋಡಾ ಈ ಜನ !
ಮೋಸದಿಂ ಮರುಳುಗೊಳಿಸುತ್ತಿಹರ ಕಂಡು,
ನೀರಿನಂತೆ ಧನವ ಸೂರೆಗೈಯುತ್ತಿಹರು
ನೋಡಾ ಈ ಜನ !!
ಕಾಯ ಕಷ್ಟದಿಂದ ಗಳಿಸದಿಹ ಹಣವು ಹಣವೇನೋ !
ಸತ್‌ಪಾತ್ರಕ್ಕೆ ಸಲ್ಲದಿಹ ಹಣವು ಹಣವೇನೋ !!
ನೀತಿಯಿಂ ರೂಪುಗೊಳ್ಳದುದು
ಲಿಂಗ ಪೂಜೆಗೆ ಸಲ್ಲದು, ನೋಡಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೫೩

ಹುಬ್ಬಳ್ಳಿಯೆಂಬುದು ಹೂಬಳ್ಳಿಯ ತವರ್ಮನೆಯು
ತೆರನಿಹುದಯ್ಯಾ !
ಮನವರಳಿದಂತೆ ಮನೆ ಬೆಳಗಿ,
ತನು ಶುದ್ಧಿಯಾಗುವುದಯ್ಯಾ !!
ಬಾಳಿನ ಹೂಬಳ್ಳಿಗೆ
ಅಳಿಯಾಸೆಯು ಗೆದ್ದಲು ಹತ್ತಿದಂತಿದ್ದರೆ,

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,

ತನ್ನತ್ತ ಕರೆದು ಎತ್ತಿಕೊಳ್ಳದೆ ಬಿಡನೆ ?

ವ್ಯಕ್ತಿತ್ವ ವ್ಯಕ್ತಿತ್ವ ಎಂದೆಂಬಿರಿ,
ವ್ಯಕ್ತಿತ್ವದಿರವನರಿಯಿರಯ್ಯಾ !
ವ್ಯಕ್ತಿತ್ವವೆಂದೊಡೆ;
ಅಹಂಕಾರವಳಿದು, ಅರುಹು ಅಳವಟ್ಟಿರಬೇಕು,
ಕತ್ತಲೆ ಕರಗಿ, ಅರುಣ ಬರುವಂತೆ;
ಆತ್ಮ ಶಕ್ತಿಯು ದಿವ್ಯ ದೀಪ್ತಿಯು
ತೊಳಗಿ ಬೆಳಗುತ್ತಿರಬೇಕು,
ಸೂರ್ಯನುದಯಿಸಿ ಬೆಳಗುವಂತೆ;
ಸದ್‌ಭಾವ-ಸದ್‌ಭಕ್ತಿ, ಸುವಿಚಾರ–ಸುವಿವೇಕಂಗಳ
ಸೂಸುತ್ತಿರಬೇಕು,
ಶ್ರೀಗಂಧ ಸುಗಂಧವ ಸೂಸುವಂತೆ;
ದುರ್ಮೋಹ-ಮದ-ಮತ್ಸರಾದಿಗಳು ಬಾರದಂತಿರಬೇಕು,
ನದಿಯೊಳು ಹರಿದು ಹೋದ ಕೋಳೆ ಬಾರದಿರುವಂತೆ,
ಇಂತಪ್ಪ ಭಾವ ಶುದ್ಧಿಯೊಳು ಮಿಂದು,
ವಾಯು ವೇಗದಂತಿರುವ ಮನವ ನಿಲಿಸಿ,
ಆತ್ಮ ಪ್ರಕಾಶವ ಪಡೆವುದೇ
ವ್ಯಕ್ತಿತ್ವದ ಒಳಗುಟ್ಟು ನೋಡಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

"ಕೋಪವೆಂಬುದು ಪಾಪದ ನೆಲಗಟ್ಟು," ನೋಡಯ್ಯಾ!
ಕೋಪ ಕೆಸರು ತುಂಬಿದ ಕೂಪ, ಕಂಡಯ್ಯಾ !
ಕೋಪವೆಂಬುದು ಮುಕ್ತಿ ಕಂಠಾಭರಣಕೆ
ಕಂಟಕ, ಕಾಣಯ್ಯಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ

ಎದೆಯ ಬಟ್ಟಲಲ್ಲಿ ಶಾಂತಿ ಸುಧೆಯನು ಸುರಿದು,
ಕೋಪಿಗಳ ಧಗಿಧಗಿಪ ಕೋಪಾಗ್ನಿಯ ಆರಿಸಿ,
ಕೃಪೆದೋರಾ ಪ್ರಭುವೆ !

ವೃದ್ಧರಾದರು, ಬುದ್ಧಿ ಬರಲೊಲ್ಲದು, ನೋಡಾ !
ಕಜ್ಜವೆಸಗದೆ ಯಶವ ಬಯಸುತಿಹರು, ನೋಡಾ !!
ಕಾಯಿ ಹಣ್ಣಾದರೇನಂತೆ, ಸಿಹಿ ಇರದನ್ನಕ್ಕರ ?
ಮಲೆತ ತೆಂಗಿನ ಕಾಯಿಯಂತಿಪ್ಪವರ ಮೆಚ್ಚ,

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ತಲೆಗೊಂದು ಪಕ್ಷವ ಕಟ್ಟಿ,
ಸಮಾಜ ಮಂದಿರವ ಸಂಹರಿಸುತ್ತಿಹರು, ನೋಡಯ್ಯಾ!
ಪ್ರತಿಷ್ಠಾ ಭೂತದ ಬೆನ್ನುಹತ್ತಿ,
ಶಕ್ತಿ-ಸಾಮರ್ಥ್ಯವ ಕಳೆದುಕೊಳ್ಳುತಿಹರು, ನೋಡಯ್ಯಾ!
ಸಮಾಜದ ಕಳಕಳಿಯನು ಕೋಲ್ಮಿಂಚಿನಂತೆ
ತೋರುತಿಹರಯ್ಯಾ !
ಆತ್ಮ ಶುದ್ಧಿಯಿಲ್ಲದವರ ಕಳಕಳಿಯು
ಬೂರಗದ ಅರಳೆಯಂತಪ್ಪುದಯ್ಯಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೫೮

ದಿನಕೊಂದು ಸಂಪ್ರದಾಯುವ ಸೇರುತಿಹರು, ನೋಡಯ್ಯಾ !
ಶಿವ ಸಮಾಜವು ನಶಿಸುತ್ತಿಹುದು, ಕಣ್‌ದೆರೆಯುಬಾರದೆ ?
ತನ್ನ ತೋಂಟದ ತರುಗಳ ತೊರೆದು,
ಅನ್ಯರ ತೋಂಟಕೆ ನೀರುಣಿಸುತಿಪ್ಪವರ ಒಲ್ಲನಯ್ಯಾ !

ನಮ್ಮ ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೫೯

ಶೀಲವಿಲ್ಲದ ನಿಯಮ ಅದೆಂತಹದೋ !
ಕಾಲವಿಲ್ಲದ ಚರಿತೆ ಅದೇತರದೋ ! !
ತಾಳವಿಲ್ಲದ ಬಾಳು ಅದೆಂತಹದೋ !
ಮೇಳವಿಲ್ಲದ ಭಜನೆ ಅದೇತರದೋ ! !
ಜ್ಞಾನವಿಲ್ಲದ ತಪವು ಅದೆಂತಹದೋ !
ತಾನವಿಲ್ಲದ ಗಾನ ಅದೇತರದೋ ! !

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರನ

ನೆನೆಯದ ಮನದವನು
ಎಲ್ಲಿದ್ದರೇನು; ಎಂತಿದ್ದರೇನು ?

ಬುದ್ಧಿ ಬೆಳೆದಂತೆ ಹೃದಯುವರಳಬೇಕು, ನೋಡಾ !
ಆತ್ಮ ಶುದ್ಧಿಯಿಲ್ಲದ ಬುದ್ಧಿ ವ್ಯರ್ಥ, ಕಂಡಯ್ಯಾ !
ಭಾಂಡವನು ಒಳಗೆ ತೊಳೆಯುದೆ,
ಮೇಲೆ ತಿಕ್ಕಿದರೇನು, ಹೇಳಾ ?
ಕಡಿವಾಣವಿಲ್ಲದ ಕುದುರೆಯಂತೆ,
ಹೃದಯವಿಲ್ಲದ ಬುದ್ಧಿಯದೇವುದಯ್ಯಾ ?
ಸಾಕು, ಸಾಕು !
ಇಂತಪ್ಪ ಬುದ್ಧಿವಂತಿಕೆಗೆ
ಹೃದಯುವಂತಿಕೆಯು ಜೋಡಾಗಿಸಯ್ಯಾ ?

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೬೧

ಶೀಲ–ಶೀಲವೆಂದು ದೂರ–ದೂರ ಸರಿಯುತ್ತಿಹಿರಿ !
ನೀರಿನಿಂದ ಮೈದೊಳೆವುದು ಶೀಲವೆ ?
ಮನದ ಮಾಲಿನ್ಯವ ತೊಳೆಯದೆ,
ತನು-ವಿಕಾರವ ಕಳೆಯದೆ,
ಘನ ಮಹಿಮನ ಪಡೆವುದೆಂತಯ್ಯಾ ?
ಮರವೆಯ ತುಳಿಯದೆ,
ಅಹಂಕಾರವ ಅಳಿಯದೆ,
ಚಿತ್–ಪ್ರಭೆಯ ಕಾಣುವುದೆಂತಯ್ಯಾ ?
ಮೈಮನಂಗಳ ಮಡಿಮಾಡಿ,
ಕಾಮಾದಿಗಳ ಹುಡಿ ಮಾಡಿ,
ಮೈದೊಳೆವ
ಮನದೊಳೆವ
ಶೀಲವೇ ಶೀಲ ಕಾಣಯ್ಯಾ,

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೬೨

ಸತ್ಯಾರಾಧನೆಯ ಮಾಡಿದೊಡೆ,
ಅಹಿಂಸೆಯೆಂಬ ರತ್ನ ದೊರಕೊಂಬುದು, ನೋಡಾ !
ನಿತ್ಯ ನಿಷ್ಠೆಯಲಿ ಭಜಿಸಿದೊಡೆ,
ಜ್ಞಾನವೆಂಬ ವೃಕ್ಷ ಚಿಗುರಿಡುವುದು, ನೋಡಾ !
ತನ್ನ ತಾನರಿದು ಶಿವ ಸುಖವ ಪಡೆಯಲು,
ಆತ್ಮ ಸಂಯಮನವೇ ದಾರಿ ದೀಪ, ಕಾಣಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೬೩

ಕರುಣಿಕರೆಂಬವರು, ಪ್ರಾವಶಾಣಿಕರಿರಬೇಕು, ನೋಡಯ್ಯಾ !
ಪೂರ್ವ ಪುಣ್ಯವಿಲ್ಲದೆ,
ಪ್ರಾಮಾಣಿಕರು ಸಿಗುವುದು ದುರ್ಲಭ, ನೋಡಯ್ಯಾ
ಕರ್ತವ್ಯದರಿವೇ ಪ್ರಾಮಾಣಿಕತೆಯ ಒರೆಗಲ್ಲು, ನೋಡಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ದೇಶ್ವರಾ.

## ೭೪

ಪ್ರವಚನ ಶ್ರವಣವು ಮೋಹಾಂಧಕಾರಕೆ
ಜ್ಯೋತಿಯಂತಿಹುದು, ನೋಡಯ್ಯಾ !
ಪ್ರವಚನ ಶ್ರವಣವು ದುರಹಂಕಾರಕೆ
ಮುದ್ಗರದಂತಿಹುದು, ನೋಡಯ್ಯಾ !
ಪ್ರವಚನ ಶ್ರವಣವು ಅಜ್ಞಾನ ಕಿಲ್ಬಿಷಕೆ
ಗಂಗೋದಕ, ನೋಡಾ !
ಪ್ರವಚನ ಶ್ರವಣವು ಭವರೋಗಕೆ
ದಿವ್ಯೌಷಧಿ, ನೋಡಾ !
ಮನನವಿಲ್ಲದ ಶ್ರವಣವು ಕಾಲಹರಣವಲ್ಲದೆ,
ಜೀರ್ಣವಾಗದ ಆಹಾರ, ಕಾಣಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಅರ್ಥವಿಲ್ಲದ ಮಾತು,
ಬಿತ್ತಲಾರದ ಭೂಮಿ
ಒಂದೇ ಕಂಡಯ್ಯಾ !
ನೀರಿಲ್ಲದ ತಟಾಕ,
ಹಾರದಿರುವ 'ಪಟಾಕಿ'
ಒಂದೇ ಕಾಣಯ್ಯಾ !
ರೆಕ್ಕೆಯಿಲ್ಲದ ಪಕ್ಷಿ,
ಅನ್ನವಿಲ್ಲದ ಕುಕ್ಷಿ
ಒಂದೇ ನೋಡಯ್ಯಾ!
ಕ್ರಿಯೆಯಿಲ್ಲದ ಜ್ಞಾನ,
ಸಂಯಮವಿಲ್ಲದ ಧ್ಯಾನ,
ಮುಕ್ತಿಗೆ ಕಂಟಕ ಕಾಣಾ ! !

ನಮ್ಮ ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೬೬

ಶಿವಶರಣರ ಸಾಹಿತ್ಯ ಸೃಷ್ಟಿ
ಆತ್ಮ ತುಷ್ಟಿಗೆ ಆಹಾರ, ನೋಡಯ್ಯಾ !
ಶಿವಶರಣರ ವಚನಾಮೃತ
ಭಾವ ಪುಷ್ಟಿಗೆ ರಸಪಾಕ, ನೋಡಯ್ಯಾ !
ಶಿವಶರಣರ ಶಿವ ಸಿದ್ಧಾಂತ
ಶಿವೋಪಾಸಕರಿಗೆ ಕಲ್ಪತರು, ನೋಡಾ ! !
ಶಿವಶರಣರ ಶಿವಾನುಭವ
ಸದ್‌ಭಕ್ತರಿಗೆ ಸದ್‌ದರ್ಪಣ, ನೋಡಾ ! !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ

ನಿನ್ನ ಶರಣರು
ಒರೆದುದು, ಬರೆದುದು
ಏನಿದ್ದರೂ
ಹಾಲ್‌ಜೇನು ಸವಿದಂತೆ !

೬೭

ಗುರು-ವಿರಕ್ತರೆಂಬವರು
ಸಮಾಜ ಪುರುಷಂಗೆ ಕಣ್ಣೆರಡು, ನೋಡಾ !
ಪರೆ ಬಂದ ಕಂಗಳಂತೆ,
ಇವರೀರ್ವರ ಪರಿ ಆಗಬಾರದು, ನೋಡಾ !
ಕಂಗಳ ಪರೆ ಹರಿದು,
ತಿಂಗಳ ಸಿರಿ, ಅಂಗವಿಸಿ,
ಮಂಗಳ ಭಾವೈಕ್ಯವಾದಾಗಳೆ
ಸಮಾಜದ ಅಂಗಳ ಬೆಳಗುವುದು, ನೋಡಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

'ನಾ ಹೆಚ್ಚು, ನೀ ಹೆಚ್ಚು' ಎನ್ನುವುದೆ,
ಗುರು ವಿರಕ್ತರ ಮಂತ್ರವಾಗಬಾರದು, ನೋಡಾ !
ಹೆಚ್ಚಿನ ಹೆಚ್ಚುಳವರಿಯುದೆ,
ಇಚ್ಛೆಗೆ ಬಂದಂತೆ ಮೆರೆವುದೆ
ತಂತ್ರವಾಗಬಾರದು, ನೋಡಾ !
ಆತ್ಮ ಸೌಂದರ್ಯವನು ಗಳಿಸದೆ,
ಸಮಾಜ ಹಿತಚಿಂತನೆಗೆಳಿಸದೆ,
ಬರೀ ಅಹಂಕಾರದ ಗಿರಿಯನೇರಿ ಕುಳಿತವರ
ಕಣ್ಣೆತ್ತಿ ನೋಡನಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೭೯

ತನುವೆಂಬ ತೋಟದಲಿ
ಸದ್‌ಗುಣವೆಂಬ ಬೀಜವ ಬಿತ್ತಿ,
ಅವಗುಣವೆಂಬ ಕಸವ ಕಿತ್ತು,
ಭವಪಾಶವ ಹರಿಯಬೇಕು, ನೋಡಾ !
ಅಷ್ಟ ಮದಂಗಳ ದೂರ ಮಾಡಿ,
ಸೃಷ್ಟಿಯೊಡೆಯನ ಧ್ಯಾನ ಮಾಡಿ,
ಕಷ್ಟ ಪರಿಹಾರ ಮಾಡಿಕೊಳ್ಳಬೇಕು. ನೋಡಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೭೦

ಆಧ್ಯಾತ್ಮವಿಲ್ಲದ ಸಾಹಿತ್ಯ
ಪ್ರಾಣ ಹೋದ ಶರೀರದಂತೆ, ನೋಡಾ !
ಧರ್ಮವಿಲ್ಲದ ರಾಜಕಾರಣ
ಔಷಧಿ ಸೇವಿಸದ ರೋಗಿಯಂತೆ, ಕಾಣಾ !
ಧ್ಯಾನವಿಲ್ಲದ ಪೂಜೆ
ತೈಲ ತೀರಿದ ದೀವಿಗೆಯಂತೆ, ನೋಡಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೭೧

ಹಲವಾರು ಗ್ರಂಥಗಳ ಬರೆದು ಫಲವೇನು,
ಬರೆದಂತೆ ಮನವಿರದನ್ನಕ್ಕರ ?
ಬೀಜಗಳ ಬಿತ್ತಿದರೆ ಫಲವೇನು ?
ಹೊಲವು ಹಸನಾಗಿರದನ್ನಕ್ಕರ ?
ಲಿಂಗವ ಪೂಜಿಸಿ ಫಲವೇನು ,
ಆಶೆ ಹರಿಯದನ್ನಕ್ಕರ ;
ಮೋಸ ತರಿಯದನ್ನಕ್ಕರ ?

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೭೨

ತತ್ತ್ವವು ಮಾತಿನಲಿ ತುಂಬಿದ್ದರೇನು,
ಕೃತಿಯೊಳಗೆ ಇಳಿಯದನ್ನಕ್ಕರ ?
ಮಧು ರಸವ ಅಧರದಲಿ ಇರಿಸಿದ್ದರೇನು,
ಉದರದೊಳಗೆ ಇಳಿಯದನ್ನಕ್ಕರ ?
ಮಾತು–ಕೃತಿ ಒಂದಾದಲ್ಲಿ
ಬಂಗಾರಕ್ಕೆ ಕುಂದಣವಿಟ್ಟಂತೆ, ನೋಡಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಮಾತಿನಲಿ ಸಿಹಿ ತುಂಬಿ
ಎದೆಯೊಳಗೆ ಕಹಿ ತುಂಬಿ
ಸಾಸಿರ ನುಡಿದರೇನು ಫಲ ?
ಹಿರಿಯರ ಕುಂದಿಸಿ,
ಗುರುಗಳ ನಿಂದಿಸಿ,
ಅಭಿಮಾನ ತಾಳಿದರೇನು ಫಲ ?

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೭೪

ಚಿಂತನವಿಲ್ಲದ ಅಧ್ಯಯನ
ಕಡೆಯಲಾರದ ಮೊಸರಿನಂತಿಹುದಯ್ಯಾ !
ಕಡೆದಂತೆ ಹೊರಡುವುದು, ತತ್ತ್ವದ ಬೆಣ್ಣೆ, ನೋಡಾ !

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.
'ವಾದೇ ವಾದೇ ಜಾಯತೇ ತತ್ತ್ವ –ಬೋಧಃ'
ಎಂಬುದು ಸತ್ಯ, ನೋಡಾ.

## ೭೫

'ಹಿತ್ತಲ ಗಿಡ ಮದ್ದಲ್ಲ'ವೆಂಬದು
ನಿಜವಾದಂತಾಗಿ, ದುಡಿವವರಿಗೆ ಬೆಲೆಯಿಲ್ಲ, ನೋಡಾ!
ಬೆಳಕಿನರಮನೆಯು ತೊರೆದು
ಕತ್ತಲು ಮನೆಯು ಸೇರುತಿಹರು, ನೋಡಾ !
ಪ್ರೋತ್ಸಾಹನವಿಲ್ಲದ ದುಡಿಮೆ
ಪರಿಮಳವಿಲ್ಲದ ಪುಷ್ಪ, ನೋಡಾ !
ಸೌಂದರ್ಯವಿಲ್ಲದ' ಸೌಧ, ನೋಡಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೭೬

ಸದ್ವಿಚಾರವಿಲ್ಲದ ಆಚಾರ,
ಸದಾಚಾರವಿಲ್ಲದ ವಿಚಾರ
ಇವೆರಡು ಭದ್ರ ಬುನಾದಿಯಿಲ್ಲದ
ಭವನದಂತೆ ಕಾಂಬುವು, ಕಾಣಾ !
ಸದ್ವಿಚಾರದ ಸದಾಚಾರ ಸಾಹಿತ್ಯವು
ಉದ್ದೀಪನಗೊಳ್ಳುತ್ತ ಹೋದಂತೆ
ಹೃದ್ದರ್ಪಣದೊಳಗೆ ತಾನೆ ತಾನು
ಕಾಣುತಲಿಹನು, ನೋಡಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಮನವ ಕಟ್ಟದೆ, ಮಠವ ಕಟ್ಟುವುದೆಂತು ?
ಬೇಲಿಯನಿಕ್ಕದೆ, ತರು-ಲತೆಗಳ ಬೆಳೆಸುವುದೆಂತು ?
ಕ್ರಿಯೆಯಿಲ್ಲದೆ, ಜ್ಞಾನವ ಗಳಿಸುವುದೆಂತು ?
ಮನವು ನಿಲ್ಲಿಸಲು ಮಠವು ಸಾಧನವಾಗಿಹುದು,ನೋಡಾ!

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೭೮

ವಿಶ್ವಾಸ ಹುಟ್ಟಿಸದ ಆಶ್ವಾಸನೆ
ಮರು ಭೂಮಿಯಲ್ಲಿ ತರುವಿಟ್ಟಂತಾಯಿತ್ತಯ್ಯಾ !
ಹೃದಯವಂತಿಕೆಯಿಲ್ಲದ ಬುದ್ಧಿ
ಬಚ್ಚಲು ನೀರಿನಂತೆ ವ್ಯರ್ಥವಾಯಿತ್ತಯ್ಯಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ

ನಿನ್ನ ಶಕ್ತಿಯರಿದಾಚರಿಸದ ಜೀವನ
ಗುಡ್ಡಕ್ಕೆ ಕಲ್ಲು ಹೊತ್ತಂತಾಯಿತ್ತಯ್ಯಾ !

## ೭೯

ಭೃತ್ಯರಾದವರು ಇಂತಿರಬೇಕು,
ಕರ್ತವ್ಯದರಿವೆ ಜೀವಾಳವಾಗಿರಬೇಕು;
ಸತ್ಯವ ಪರಿಪಾಲಿಸುತ್ತಿರಬೇಕು;
ಒಡೆಯನ ಗುಟ್ಟುನೊಡೆ–ಯದಂತಿರಬೇಕು;
ನೆರಳಿನಂತೆ ಹಿಂಬಾಲಿಸುತ್ತಿರಬೇಕು.
ವೈಗಳ್ಯರೆಂದಿಗೂ ಆಗದಿರಬೇಕು.
ಇದೇ ಭೃತ್ಯಾಚಾರ, ನೋಡಾ !
ಇಂತಪ್ಪ ನಿಜವಾದ ಭೃತ್ಯರೇ
ನಿಜಸುಖದ ನಿಚ್ಚಣಿಕೆ, ನೋಡಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ವಿದ್ಯೆಯಿದ್ದೊಡೆ, ವಿನಯವಂತನಾಗಿರಬೇಕು ನೋಡಾ !
ಬುದ್ಧಿಯಿದ್ದೊಡೆ, ಹೃದಯವಂತಿಕೆಯುಳ್ಳವನಾಗಿರಬೇಕು,
ನೋಡಾ
ಯೋಗಿಯಾದೊಡೆ, ಸಂಯಮ ಜೀವಿಯಾಗಿರಬೇಕು,
ನೋಡಾ!
ತ್ಯಾಗಿಯಾದೊಡೆ, ರಾಗ-ರಹಿತನಾಗಿರಬೇಕು, ನೋಡಾ !
ತಪಸ್ವಿಯಾದೊಡೆ, ಕೋಪದ ಲವಲೇಶವಿಲ್ಲದಿರಬೇಕು,
ನೋಡಾ !
ಕವಿಯಾದೊಡೆ, ರಸ-ಋಷಿಯಾಗಿರಬೇಕು ನೋಡಾ !

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ವೀರಶೈವನಾದೊಡೆ, ಅಂಗದ ಮೇಲೆ ಲಿಂಗವ
ಧರಿಸಿರಬೇಕು;
ವೀರಶೈವನಾದೊಡೆ, ಪ್ರಾಣವೇ ಲಿಂಗವಾಗಿ,
ಲಿಂಗವೇ ಪ್ರಾಣವಾಗಿರಬೇಕು;
ವೀರಶೈವನಾದೊಡೆ, ಗುರುವಿಗೆ ತನುವನ್ನು
ಲಿಂಗಕ್ಕೆ ಮನವನ್ನು
ಜಂಗಮನಿಗೆ ಧನವನ್ನು ಸಮರ್ಪಿಸಬೇಕು;
ವೀರಶೈವನಾದೊಡೆ, ಅಷ್ಟಾವರಣ-ನಿಷ್ಠನಾಗಿರಬೇಕು;
ವೀರಶೈವನಾದೊಡೆ, ಪಂಚಾಚಾರ
ಪಾರಾಯಣನಾಗಿರಬೇಕು;
ವೀರಶೈವನಾದೊಡೆ,ಷಟ್‌ಸ್ಥಲದಲ್ಲಿ ಶ್ರದ್ಧೆಯಿಟ್ಟಿರಬೇಕು;
ವೀರಶೈವನಾದೊಡೆ, "ಕಾಯಕವೆ ಕೈಲಾಸ"ವೆಂದು
ಕಾರ್ಯವೆಸಗುತ್ತಿರಬೇಕು;
ವೀರಶೈವನಾದೊಡೆ, ಸಕಲ ಜೀವಾತ್ಮರಿಗೆ ಲೇಸನೇ
ಬಯಸುತ್ತಿರಬೇಕು !
ಇಂತಪ್ಪ ವೀರಶೈವನು ಸಂಸಾರ ಸಾಗರವ ದಾಂಟಿ,
ಮುಕ್ತಿ ಮಂದಿರವ ಮುಟ್ಟುವನಯ್ಯಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೮೨

ಸತಿಯಹಾದೊಡೆ, ಪತಿಯುನಗಲದಂತಿರಬೇಕು;
ಶಿವ ಮೆಚ್ಚಿ 'ಅಹುದಹುದು'! -ಎನ್ನುವಂತಿರಬೇಕು.
ಸತಿ-ಪತಿಗಳ ಸಮರಸ ಜೀವನವೇ
ಸಂಸಾರ ವೃಕ್ಷಕ್ಕೆ ಫಲಕಾರಿ, ನೋಡಯ್ಯಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ವಚನ ಸಾಹಿತ್ಯವು ಆತ್ಮಾನಂದಕ್ಕಾಧಾರವೆಂದು
ವಚನ ರಚನಾ ಸಾಗರದಲ್ಲಿ ಧುಮುಕಿರುವೆನಯ್ಯಾ !
ವಿಶಾಲವಾಗಿದ್ದರೂ ಈಸುವಾಸೆ ತುಂಬಿಹುದಯ್ಯಾ !
ಮುಳುಗೆದ್ದು, ರತ್ನಂಗಳ ನೀಡಿ,
ಆತ್ಮ ಸೌಂದರ್ಯವ ಬೆಳೆಸುವ ಹಂಬಲವಿದೆಯಯ್ಯಾ !
ನನ್ನೀ ವಚನ ರಚನೆಗೆ
ಮಹಾನುಭಾವಿಗಳ ವಚನ ಸಾಹಿತ್ಯವೇ
ಮಾರ್ಗದರ್ಶಿಕೆ, ಕೇಳಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಶರೀರ ಸೌಷ್ಠವಕಿಂತ, ಚಿತ್ತ ಸೌಷ್ಠವ ಹೆಚ್ಚಿನದಯ್ಯಾ ;
ಆ ಚಿತ್ತ ಸೌಷ್ಠವಕಿಂತ, ಬುದ್ಧಿ ಸೌಷ್ಠವ ಮಿಗಿಲಾದುದಯ್ಯಾ ;
ಆ ಬುದ್ಧಿ ಸೌಷ್ಠವಕಿಂತ, ಭಾವ ಸೌಷ್ಠವ ಮೇಲಾದುದಯ್ಯಾ ;
ಆ ಭಾವ ಸೌಷ್ಠವಕಿಂತ, ಆತ್ಮ ಸೌಷ್ಠವ ಹೆಚ್ಚಿನದಯ್ಯಾ.
ಇದು ಕಾರಣ, ಆತ್ಮ ಸೌಷ್ಠವ ಸಂಪಾದನೆಯೆ
ಮಾನವನ ಅಂತಿಮ ಧ್ಯೇಯುವಾಗಿರಬೇಕಯ್ಯಾ !
ಇದುವೆ, ಅನುಭಾವ ಸಂಪತ್ತು ಕಾಣಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಕವಿತಾ ಶಕ್ತಿಗೆ ಕಲ್ಪನೆಯೊಂದೇ ಸಾಲದು ನೋಡಾ !
ಅಂಗ ಸೌಂದರ್ಯಕ್ಕಲಂಕಾರವೊಂದೆ ಸಾಲದು ನೋಡಾ!
ಅನ್ನ-ಅರಿವೆ-ಆಭರಣಂಗಳು ಅಂಗಕ್ಕೆ ಪೂರಕವಾದಂತೆ,
ಧ್ಯಾನ, ವಿವೇಚನೆ, ಭಾವಂಗಳು
ಕವಿತಾ ಶಕ್ತಿಗೆ ಪ್ರೇರಕವಾಗಿಹವು, ಕಾಣಾ,

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೮೭

ಹೃದಯದ ಸಿರಿ ಸಂಗಳಿಸಲು
ಮೃದು ಹೃದಯವೆ ಮೂಲವಯ್ಯಾ !
ತಿಳಿ ಮನದೊಂದಿಗೆ ತೆರೆದಷ್ಟು
ಹೃದಯವು ಥಳಥಳನೆ ತೊಳಗುವುದಯ್ಯಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾಃ

## ೮೭

ಮಾತಿನೊಳು ಮಾಧುರ್ಯ,
ಹೊಟ್ಟೆಯೊಳಂ ಮಾತ್ಸರ್ಯ,
ಇದೇತರ ಚಾತುರ್ಯ ?
ಒಳಗಿಹುದು ಕುಟಿಲ ಕುಯುಕ್ತಿ,
ಹೊರಗಿಹುದು ವಿನಯ-ವಿರಕ್ತಿ,
ಇದೆಂತಹ ಭಕ್ತಿ ?
ಮೇಲೆ ಮೇಲೆ ಥಳಕು,
ಒಳಗೊಳಗೆ ಕೊಳಕು,
ಇದೇತರ ಬೆಳಕು ?
ಅಂತರಂಗ ಶುದ್ಧಿಯಿಲ್ಲದೆ,
ಅಭಿಮಾನ ತೋರುವರ ಒಲ್ಲನೊಲ್ಲನು

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಬಳ್ಳಿಯಿಂದ ಹೂ ಹುಟ್ಟಿ
ಹೊಗರೇರಿ, ಕಂಪು ಹೊರ ಚಿವ್ಮುವಂತೆ,
ತಪದಿಂದ ಕವಿತೆ ಕೊನರಿ,
ಬೆಳೆ ಬೆಳೆದು ಕಾವ್ಯಾನಂದ ಹೊರ ಹೊಮ್ಮಬೇಕು!
ತಪವಿಲ್ಲದ ಕಾವ್ಯ ತೇಜವಿಲ್ಲದ ಗಾಜಿನ ಮಣಿಯಂತೆ
ನೋಡಾ !
"ನಾನೃಷಿಃ ಕುರುತೇ ಕಾವ್ಯಮ್" ಎಂದುದಾಗಿ
ಋಷಿಯಾಗದವನು ಕವಿಯಾಗಲಾರನೆಂಬುದು ಸತ್ಯ
ನೋಡಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೮೯

ನುಡಿಯುವುದು ಸರಳ, ನಡೆವುದು ಕರಕಷ್ಟ, ಕಾಣಯ್ಯಾ!
ಮನೆಯು ಕೆಡಹುವುದು ಸುಲಭ,
ಅದನು ಕಟ್ಟುವುದು ಕಡುಕಷ್ಟ, ಕಾಣಯ್ಯಾ !
ಬೆಂಕಿಯ ಹಚ್ಚುವುದು ಸುಲಭ,
ಆದನಾರಿಸುವುದು ಕರಕಷ್ಟ, ಕಾಣಯ್ಯಾ !
ಕೋಪವ ತಾಳುವುದು ಸುಲಭ,
ಸೈರಣೆಗೆ 'ಸೈ'ಗುಡುವುದು ಕಡುಕಷ್ಟ ಕಾಣಯ್ಯಾ!
ಸ್ವೈರ ವೃತ್ತಿಯಿಂದಿರುವುದು ಸುಲಭ,
ಸಂಯಮವ ಸಾಧಿಸುವುದು ಕರಕಷ್ಟ ಕಾಣಯ್ಯಾ!
ಬಂಧುಗಳನಗಲಿಸುವುದು ಸುಲಭ,
ಅವರ ಕೂಡಿಸುವುದು ಕಡುಕಷ್ಟ ಕಾಣಯ್ಯಾ
ಗಿಡ-ಮರಗಳ ನಾಶಗೊಳಿಸುವುದು ಸುಲಭ,
ಉಳಿಸಿ ಬೆಳೆಸುವುದು ಕಡು ಕರಕಷ್ಟ ಕಾಣಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

'ನುಡಿದಂತೆ ನಡೆದರೆ, ಇದೇ ಜನ್ಮಕಡೆ' ಕಾಣಯ್ಯಾ.

ಕಾಯದಲ್ಲಿ ಮಾಯೆಯ ತುಂಬಿ
ವಚನದಲ್ಲಿ ಕ್ರೋಧವ ತುಂಬಿ
ಮನದಲ್ಲಿ ಮೋಹವ ತುಂಬಿ
ಭಾವದಲ್ಲಿ ಭ್ರಾಂತಿಯ ತುಂಬಿ
ಭವ ತಿಮಿರದಲ್ಲಿ ತಿರುಗುವ ಭಕ್ತರನು
ಭವಿಗಳೆನ್ನದೆ ಮತ್ತೇನೆಂದು ಕರೆಯಬೇಕು, ಹೇಳಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ನಾನೊಂದು ಬಗೆದರೆ
ತಾನೊಂದು ಪರಿಯಾಗಿಹುವುದು ನೋಡಾ
ಮುಕ್ತಿಕಂಠಾಭರಣಕೆ, ಕಂಟಕ ಬಾರದಿರಲು ಶ್ರಮಿಸಿದರೆ
ಪಂಗಡ ದ್ವೇಷ ಸಾಧಿಸುತ್ತಿಹರು ನೋಡಾ
"ಊರು ಉಪಕಾರವರಿಯದು
ಹೆಣ ಶೃಂಗಾರವರಿಯದಂತಾ"ಯಿತ್ತಯ್ಯಾ
ಅಂತರಂಗದಿಂಗಿತವನರಿಯದೆ ಜಾತಿ ದ್ವೇಷವ ಸಾಧಿಸಿದರೆ
ಬಸವ ತತ್ತ್ವ ಪ್ರಚಾರವೆಂತಾಗುವದಯ್ಯಾ
ಗಾಳಿ ಗುದ್ದಿ ಮೈ ನೋಯಿಸಿಕೊಂಡಂತೆ
ವ್ಯರ್ಥವಾಗಿಪ್ಪುದಯ್ಯಾ
ಹೃದಯದೊಳಗೆ ಭಕ್ತಿಯು ತುಂಬದೆ
ಬರಿ ಯುಕ್ತಿಯ ಮಾತು ತುಂಬಿದರೆ
ಮುಕ್ತಿಯಂತಪ್ಪುದಯ್ಯಾ
ಬಸವ ತತ್ತ್ವದ ಪರಿಮಳ ಬೀರಲು
ಅಭಿಮಾನೋತ್ಸಾಹವಿದ್ದರೆ
ಪರಿಪೂರ್ಣ ವಿಚಾರಿಸಿ, ವಿವೇಚಿಸಿ
ತಿದ್ದಿಕೊಂಡು ಮುಂದಡಿಯಿಡಬೇಕಲ್ಲದೆ
ಸದ್ದು ಗದ್ದಲ ಮಾಡುತ್ತ ಹೋದಲ್ಲಿ
ನಮ್ಮ ಕಾಲ ಮೇಲೆ ನಾವೇ ಕಲ್ಲು
ಹಾಕಿಕೊಂಡಂತಾಯಿತ್ತಯ್ಯಾ
"ಸಿಟ್ಟಿನಲ್ಲಿ ಕೊಯ್ದ ಮೂಗು ಶಾಂತಿಯಲ್ಲಿ ಬಂದೀತೆ"?



ಚಿತ್ಸ್ವಮನ

ಅನ್ಯರ ಅಪಹಾಸ್ಯಕ್ಕೆಡೆಯಾಗದಿರಲೆಂದು
ಸಮಾಜ ಹಿತವ ಬಯಸಿದರೆ
ಅಂಗೈ ತೋರಿಸಿ ಅವಲಕ್ಷಣ ಕೇಳಿಕೊಂಡಂತಾಯಿತ್ತಯ್ಯಾ
ಜಾತಿ ಪಂಗಡಗಳೆಂಬ ಭೇದಂಗಳ ನಿವಾರಿಸಿ
ನಾವೆಲ್ಲರೂ ಒಂದೇ ವೃಕ್ಷದ ಹೂಗಳೆಂದು ತೋರಿಸಿ
ಭಾವೈಕ್ಯದ ವಿಶಾಲ ಮನೋಭಾವನೆಯನ್ನು ಕರುಣಿಸಿ
ಎಲ್ಲರನು ಹಿರಿಗುರಿಯತ್ತ ಸಾಗಿಸಿ,
ಬೆಳಕಿನ ದಾರಿಯತ್ತ ನಡೆಯಿಸಿ ಸಲಹಯ್ಯ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಬಸವ ತತ್ತ್ವದರ್ಥವನರಿಯದೆ
ಅರ್ಥಕ್ಕಪಾರ್ಥವ ಮಾಡಿಕೊಂಡು
ಸ್ವಾರ್ಥ ಸಾಧಿಸುತ್ತಿಹರು ನೋಡಯ್ಯಾ,
ಸಮಾಜದಲ್ಲಿ ಭೇದ ಪ್ರಭೇದಂಗಳು
ಬೆಳೆಸುತ್ತಿಹರು ನೋಡಯ್ಯಾ,
ಸಮಾಜದಲ್ಲಿ ಭಾವೈಕ್ಯದ ಸಿರಿ ಬೆಳೆಸುವದ ಮರೆತು
ಅಡ್ಡಗೆರೆ ಕೊರೆಯುತ್ತಿಹರು ನೋಡಯ್ಯಾ,
ಹೃದಯದೊಲವಿನ ಶಿಲೆಯೊಡೆಯದೆ
ಭಾವೈಕ್ಯವು ಮಾತಿನಿಂದ ಸಾಧಿಸದು, ಸಾಧಿಸದಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೯೩

ವ್ಯಕ್ತಿ ದ್ವೇಷವು ಆ ವ್ಯಕ್ತಿಗಷ್ಟೆ ಸೀಮಿತವಲ್ಲದೆ,
ಸಮಾಜಕ್ಕೂ ಹಾನಿಕಾರಕವಯ್ಯಾ,
ವರ್ಗ-ದ್ವೇಷವು ಸಮಾಜವ ಭಗ್ನಗೊಳಿಸುವುದಲ್ಲದೆ,
ಭಾವೈಕ್ಯಕ್ಕೆ ವಿಘ್ನವ ತಂದೊಡ್ಡುವುದಯ್ಯಾ !
ವನಕ್ಕೆ ತಗಲಿದ ಬೆಂಕಿ,ವನವೆಲ್ಲವ ಸುಡದಿಪ್ಪುದೆ,ಅಯ್ಯಾ?

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ದೇಶ್ವರಾ.

೯೪

ಸಾಹಿತ್ಯವೆಂದರೆ, ಶಬ್ದದ ಪೋಣಿಕೆಯಲ್ಲ;
ಸಾಹಿತ್ಯವೆಂದರೆ, ಕಲ್ಪನೆಯ ರೆಕ್ಕೆಯಲ್ಲ;
ಸಾಹಿತ್ಯವೆಂದರೆ, ಶುಷ್ಕ ಭೂಮಿಯಲ್ಲ;
ಸಾಹಿತ್ಯವೆಂದರೆ, ಬರಿಯ ಬುದ್ಧಿಯ ಬುಗ್ಗೆಯಲ್ಲ
ನಿಜ ಸಾಹಿತ್ಯವೆಂದರೆ;
ಸರ್ವ ರಸ ಪರಿಪೂರ್ಣ,
ಸದ್‌ಭಾವ ವಿಸ್ತೀರ್ಣ,
ಅನುಭವ-ಅನುಭಾವಗಳ ಅಮೃತಪಾಕ, ನೋಡಾ !

ನಮ್ಮ ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಮಾನವತೆಯಿಲ್ಲದ ಬ್ರಹ್ಮಚರ್ಯವು
ಕಾನನದ ಕುಸುಮದಂತೆ,ವ್ಯರ್ಥ, ಕಂಡಯ್ಯಾ !
ರೋಗಿಯ ಬಾಧೆಯ ನೀಗಿಸದ ಔಷಧಿಯು
ಸಾಗರದ ಮೇಲಣ ಮಳೆಯಂತೆ ವ್ಯರ್ಥ, ಕಂಡಯ್ಯಾ !
ನಿರಹಂಕಾರವಿಲ್ಲದ ಪಾಂಡಿತ್ಯವು
ಹರಿಗಡಿದ ಒಡ್ಡಿನಂತೆ ವ್ಯರ್ಥ, ಕಂಡಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

"ಮಾತೆಂಬುದು ಜ್ಯೋತಿರ್ಲಿಂಗ"ವಯ್ಯಾ !
ಅದೆಂತೆಂದೊಡೆ,
ಮಾತು ಹಿತವಾಗಿರಬೇಕು,
ಮಾತು ಮಿತವಾಗಿರಬೇಕು;
ಮಾತು ಉಚಿತವಾಗಿರಬೇಕು,
ಮಾತು ಖಚಿತವಾಗಿರಬೇಕು,
ಮಾತು ಸತ್ಯವಾಗಿರಬೇಕು,
ಮಾತು ಸತ್ತ್ವಯುತವಾಗಿರಬೇಕು;
ಮಾತು ಸ್ವಾರಸ್ಯವಾಗಿರಬೇಕು,
ಮಾತು ಸ್ವಾನುಭವಯುಕ್ತವಾಗಿರಬೇಕು ಕಾಣಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೯೭

ಮಾತು ಕೆಡಸಿತ್ತು, ಬಂಧು-ಪ್ರೇಮವನು;
ಮಾತು ಕೆಡಸಿತ್ತು, ಕ್ರಿಯಾ-ಶೀಲತೆಯನು;
ಮಾತು ಕೆಡಸಿತ್ತು, ರಾಜ್ಯ-ಸಾಮ್ರಾಜ್ಯವನು;
ಮಾತು ಕೆಡಸಿತ್ತು, ನಿತ್ಯಾನಂದ ಸುಖವನು.
ಮಾತು ಮುತ್ತಾದರೆ
ಮಾತು ಮಾಣಿಕ್ಯವಾದರೆ
ಓತು ಬಂದ ಕತ್ತಲೆ ಸೋತು ಹೋದಿತು, ನೋಡಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೯೮

ಅಗಳಿನಿಂದ ಅನ್ನದ ಪರೀಕ್ಷೆ
ಎಳೆಯಿಂದ ವಸ್ತ್ರದ ಪರೀಕ್ಷೆ
ಮಾತಿನಿಂದ ಮನದ ಪರೀಕ್ಷೆ
ಮುಖದಿಂದ ಹೃದಯದ ಪರೀಕ್ಷೆ
ನಾದದಿಂದ ಘಂಟೆಯ ಪರೀಕ್ಷೆ
ಪರಾಗದಿಂದ ಪುಷ್ಪದ ಪರೀಕ್ಷೆ
ಒರೆಗಲ್ಲಿನಿಂದ ಚಿನ್ನದ ಪರೀಕ್ಷೆ
ವಿಜ್ಞಾನದಿಂದ ನಿಸರ್ಗದ ಪರೀಕ್ಷೆ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,

ನಿನ್ನಿಂದ ನನ್ನ ಪರೀಕ್ಷೆ, ಕಾಣಾ !
ನಿನ್ನ ಪರೀಕ್ಷೆಯಲಿ ಪಾರಾಗಿ ನಿಲ್ಲುವ ನಿಲುವು
ನೀಡಾ, ನಿಮ್ಮ ಧರ್ಮ !
ನಿನ್ನ ಈ ಪರೀಕ್ಷೆಯಲಿ ಪಾರಾದವರು ವಿರಳ, ಕಾಣಾ!!

## ೯೯

ಹೃದಯವೆಂಬ ಹಣತೆಯಲ್ಲಿ
ಸಮತೆ–ಸಹಕಾರದ ಬತ್ತಿಯನಿರಿಸಿ
ಸೌಹಾರ್ದತೆಯ ಎಣ್ಣೆಯನೆರೆದರೆ,
ಭಾವೈಕ್ಯವೆಂಬ ಬೆಳಗಿನಲ್ಲಿ ಸಂಘಟನೆ ಸಂಜನಿಸುವುದಯ್ಯಾ!
ಸಮಯ ಕಳೆಯದೆ
"ಸಮಯ" -ಪರಂಪರೆಗಳೆಲ್ಲವೂ ಕೂಡಿಕೊಂಡರೆ,
ಸಮಾಜದ ಪುನರ್ಘಟನೆಗೆ ಪುರಸ್ಕಾರ ಸಿಗುವುದಯ್ಯಾ!
ಸಮಯ-ಭೇದದಲ್ಲಿ ಹುರುಳಿಲ್ಲ;
ಗುರು-ವಿರಕ್ತ-ಭೇದದಲ್ಲಿ ತಿರುಳಿಲ್ಲ;
ಒಳ ಪಂಗಡಂಗಳ ಭೇದದಲ್ಲಿ ಕರುಳಿಲ್ಲ,
–ಈ ಭೇದ–ತ್ರಯದ ನಿರಸನವಾದಾಗಳೆ,
ವೀರಶೈವ ಷಟ್‌ಸ್ಥಲ ಧ್ವಜವು ಮರಳಿ–ಮರಳಿ,
ಆಗಸದೆತ್ತರಕೆ ಹಾರಾಡುವುದಯ್ಯಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೧೦೦

ಪತಿತರನು ಪೊರೆಯುವುದೇ ಪರಮ ಧರ್ಮವಯ್ಯಾ,
ಎದೆ ಕರಗಿ ಎತ್ತಿಕೊಳ್ಳುವುದೆ ಧರ್ಮದ ಸಾರ,ನೋಡಾ!
ಬೆಳಕಿನತ್ತ ಕರೆದೊಯ್ಯುವುದೆ
ಧರ್ಮದ ಮರ್ಮ, ನೋಡಾ!
ಆತ್ಮ ದೀಪ್ತಿಯ ಜಾಗ್ರತಗೊಳಿಸುವುದೆ
ಧರ್ಮದ ಗುಟ್ಟುನೋಡಾ !
ಇಂತೀ ಧರ್ಮದ ಮರ್ಮವ ತಿಳಿದಾಚರಿಸುವಂತೆ
ಕರುಣೆದೋರಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ದಯೆಯಿರದ ಧರ್ಮ, ಕ್ರಿಯೆಯಿರದ ಜ್ಞಾನ
ಕಳಸವಿರದ ತೇರಿನಂತೆ, ಕಾಣಯ್ಯಾ!
ವ್ಯಕ್ತಿತ್ವವಿರದ ಶಕ್ತಿ, ತೇಜವಿರದ ಸ್ಫೂರ್ತಿ
ಲಿಂಗವಿಲ್ಲದ ದೇಗುಲದಂತೆ, ನೋಡಯ್ಯಾ!!

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೧೦೨

ಸಮಾಜವು ಒಡೆದ ಗಡಿಗೆಯಂತಾಗಿಹುದಯ್ಯಾ
ಸಮಾಜವು ಬಲವಿಲ್ಲದ ರೋಗಿಯಂತಾಗಿಹುದಯ್ಯಾ
ಸಮಾಜವು ತಂತಿಯಿಲ್ಲದ ವೀಣೆಯಂತಾಗಿಹುದಯ್ಯಾ
ಸಮಾಜವು ಧೂಳು ಮುಸುಕಿದ
ಕನ್ನಡಿಯಂತಾಗಿಹುದಯ್ಯಾ
ಇದು ಕಾರಣ,
ಒಲವು ಒಗ್ಗಟ್ಟಿಲ್ಲದ ಸಮಾಜವು
ಬರಿ ಮಾತಿಗರ ಮಾಲೆಯಾಗಿಹುದು, ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೧೦೩

ಭಾವಕ್ಕೆ ಭಾಷೆಯು ಹೊದಿಕೆ;
ಅಂಗಕ್ಕೆ ಬಟ್ಟೆಯು ಹೊದಿಕೆ;
ಲಿಂಗಕ್ಕೆ ಕಂತಿಯು ಹೊದಿಕೆ;
ಆತ್ಮಕ್ಕೆ ಅರುವಿನ ಹೊದಿಕೆ.

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,
ನಿನ್ನಡಿಯ ಆಸರೆಗೆ ನಿನ್ನ ನಾಮಸ್ಮರಣೆಯ ಹೊದಿಕೆ!

## ೧೦೪

ಬೆಂಕಿಯ ಮೇಲೆ ತುಪ್ಪವ ಹಾಕಿದರೆ,
ಭಗ್ಗನೆ ಉರಿಯೇಳದೆ ಬಿಡುವುದೆ?
ಬಿಸಿಲಿಗೆ ಬೆಣ್ಣೆಯಿಟ್ಟರೆ,
ಮೆಲ್ಲಗೆ ಕರಗದೆ ಬಿಡುವುದೆ?
ಮಂಗನಿಗೆ 'ಹೆಂಡ' ಕುಡಿಸಿದರೆ,
ಹುಚ್ಚೆದ್ದು ಕುಣಿಯದೆ ಬಿಡುವುದೆ?
ಚಿತ್ತ–ವೃತ್ತಿಯೆಂಬ ಹೊನಲಿಗೆ
ಸಂಯಮವೆಂಬ ಆಣೆಕಟ್ಟು ಕಟ್ಟದಿದ್ದರೆ,
ಅರ್ಭಟಿಸಿ ಮೇಲ್ ಬೀಳದಿರಬಹುದೆ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಮಾತು ಮತಿಯ ಕೆಡಸಿತ್ತು;
ಮಾತು ಧೃತಿಯ ಕೆಡಿಸಿತ್ತು;
ಮಾತು ಕತೆಯ ಕೆಡಿಸಿತ್ತು;
ಮಾತು ಜೊತೆಯ ಕೆಡಿಸಿತ್ತು;
ಇಂತಪ್ಪ ಮಾತು ಮುತ್ತಾದರೆ,
ಕಲಹವೆಲ್ಲಿಂದ ಬಪ್ಪುದಯ್ಯಾ ?
ಮಾತರಿಯದವನು ಜಗಳ ತರುವಂತೆ
ಮಾತು ಬಲ್ಲವ ಮಾಣಿಕವ ತರುವನಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೧೦೩

ಮಾತಿನಿಂದ ಪ್ರೀತಿ, ಭೀತಿ;
ಮಾತಿನಿಂದ ಸ್ಫೂರ್ತಿ, ಕೀರ್ತಿ;
ಮಾತಿನಿಂದ ಹಗೆತನ, ಕೆಳೆತನ;
ಮಾತಿನಿಂದ ಬಡತನ, ಸಿರಿತನವಯ್ಯಾ!
ಇದು ಕಾರಣ, ಮಾತೇ ಸುಖ–ದುಃಖಂಗಳಿಗೆ
ಕಾರಣ ನೋಡಾ,

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ವಿರತಿಯ ಮಹತಿಯು ವಿರಾಗಿಗಲ್ಲದೆ,
ಅನ್ಯರಿಗೆ ಅರ್ಥವಾಗುವುದೆಂತಯ್ಯಾ?
ಕೃಷಿಯ ಕಾಯಕ ಕೃಷಿ–ಋಷಿಗಲ್ಲದೆ
ಮತ್ತೊಬ್ಬರಿಗೆ ಮನವರಿಕೆಯಾಗುವುದೆಂತಯ್ಯಾ?
ಯಂತ್ರದ ಪರಿಚಯ ಯಂತ್ರಚಾಲಕಗಲ್ಲದೆ
ಇನ್ನೊಬ್ಬರಿಗೆ, ಇರುವುದೆಂತಯ್ಯಾ?
ದಾಸೋಹದ ಪರಿಜ್ಞಾನ ತ್ರಿವಿಧ ದಾಸೋಹಿಗಲ್ಲದೆ
ಹೊನ್ನು-ಹೆಣ್ಣು-ಮಣ್ಣು ಬೇಕೆಂಬ
ಆಸೆಬುರುಕರಿಗಾಗುವುದುಂಟೆ?

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಮಾಡುವ ಕೃತಿಯು ಮೃಡನೊಲಿಯುವಂತಿರಬೇಕು;
ಆಡುವ ಭಾಷೆ ಜನ ಮೆಚ್ಚುವಂತಿರಬೇಕು;
ಬೇಡುವ ಧನ ಪರಹಿತಕಾಗಿರಬೇಕು;
ನೀಡುವ ದಾನ ಸಾರ್ಥಕವಾಗಿರಬೇಕು, ನೋಡಾ!

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,

ನನ್ನ ಮನ ನಿನಗಾಗಿ ಮೀಸಲಾಗಿರಬೇಕು.

## ೧೦೯

ಗುರುವು ಭವಾರಣ್ಯದೊಳಿರ್ದೊಡೆ
ಶಿಷ್ಯನುದ್ಧಾರವೆಂತು?
ಭವದ ಸೋಂಕಿಂದೆ, ಗುರುವಿಗೆ ಚಿಚ್ಛಕ್ತಿ-
ಮೂಡುವುದೆಂತು?
ಶಿಷ್ಯನಿಗೆ ಭಕ್ತಿ ಹುಟ್ಟುವುದೆಂತು?
ಮಿಡಿಗಾಯಿ ಹಣ್ಣಾದಂತಾದಲ್ಲಿ
ಆ ಹಣ್ಣಿನ ರುಚಿ ಬರುವುದೆಂತು?
ಬೇಲಿ ಎದ್ದು ಹೊಲ ಮೇಯ್ದಲ್ಲಿ
ಬೆಳೆ ಬರುವುದೆಂತು, ಹೇಳಾ?

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಗುರುಗಳಾದವರು ದೀಕ್ಷೆಯೊಂದನ್ನ ಮಾಡಬೇಕಲ್ಲದೆ,
ಅನುಗ್ರಹವ ಮಾಡುವುದು ಸಲ್ಲದು, ನೋಡಾ;
ಜಂಗಮರಾದವರು ಅನುಗ್ರಹವೊಂದನ್ನೆಮಾಡಬೇಕಲ್ಲದೆ,
ದೀಕ್ಷೆ ಮಾಡುವುದುಸಲ್ಲದು, ನೋಡಾ;
ಅವರವರ ಕರ್ತವ್ಯ, ಅವರವರಿಗೆ;
ಕ್ರಿಯಾಭಾಗವು ಗುರುಗಳಿಗಾಗಿ,
ಜ್ಞಾನಭಾಗವು ಜಂಗಮರಿಗಾಗಿ—
ಗುರು–ಜಂಗಮರೀರ್ವರು ಈ ರೀತಿ ನಡೆದರೆ,
ಗುರು–ವಿರಕ್ತರ ಸಾಮರಸ್ಯಕ್ಕೆ ನಾಂದಿಯಾಗಿ,
ಅಷ್ಟಾವರಣ ಕ್ರಮ ಸಿದ್ಧಿಪುದು ನೋಡಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಕೋಟಿ ಲಿಂಗಂಗಳ ಸ್ಥಾಪಿಸಿ,
ಕೋಟಲೆಗೊಳ್ಳಲೇಕೆ ?
ಕೋಟಿ ಹೃದಯಂಗಳಿಗೆ ಲಿಂಗವಧರಿಸಿ,
ಸಂತಸಗೊಂಡರೆ ಸಾಲದೆ ?
ಎದೆಯ ಮೇಲೆ ಲಿಂಗವಿರದಿದ್ದರೂ
ಲಿಂಗವಂತರೆಂದು ಹೇಳಿಕೊಳ್ಳುವರ ಕಂಡು
ಎನ್ನ ಮನ ಕಳವಳಗೊಳ್ಳುತಿಹುದಯ್ಯಾ !
ಮರುಭೂಮಿಯ ಮಳಲಿನೊಳು
ಸಸಿಯ ನೆಟ್ಟೊಡೆ ಹಾಸ್ಯಾಸ್ಪದವಲ್ಲದೆ
ಮತ್ತೇನು ಹೇಳಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,

### ೧೧೨

ಮರೆಯುವುದ ಮರೆದು
ಧರ್ಮದಾ ನಿಜ ತತ್ತ್ವವ ಮರೆಯಿಸಿರೋ !
ತಳಕೆಟ್ಟ ಸುವರ್ಣದ ಘಟದಂತೆ
ಧರ್ಮದಾ ಗತಿಯಹಾಗಿಪ್ಪುದು, ಕೇಳಿರೋ !
ಧರ್ಮವ ತೊರೆದು ಮುಚ್ಚಿದೆದೆಯಿಂದ
ಹುಚ್ಚರಂತೆ ತಿರುಗುತ್ತಿಹರು, ಕೆಲಬರು ನೋಡಿರೋ !
ಗಿಡಕ್ಕೆ ನೀರೆರೆದರೆ,
ಪಲ್ಲವಿಸಿ ಫಲ-ಪುಷ್ಪ ನೀಡುವುದಲ್ಲದೆ,
ನೀರೆರೆಯದೆ ಮೇಲೇರಿ ಕುಳಿತರೆ,
ಬಾಡದೇ ಬಿಟ್ಟೀತೆ ?

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೧೧೩

ಹೃದಯವರಳದೆ, ಕದವ ತೆಗೆಯದೆ
ಸದು ಮನವ ಪಡೆವುದೆಂತಯ್ಯಾ ?
ಮದವ ಮುರಿಯದೆ, ಮದನನ ಜಯಿಸದೆ
ಸದು ಹೃದಯವ ಪಡೆವುದೆಂತಯ್ಯಾ ?
ಭಾವ ತುಂಬದೆ, ಜ್ಞಾನ ಬಲಿಯದೆ
ಸದು ಭಕುತಿಯ ಪಡೆವುದೆಂತಯ್ಯಾ ?
ಇದು ಕಾರಣ, ತನುವ ಸವೆಯಿಸಿ, ಮನವ ನಿಲ್ಲಿಸಿ
ಸದು ವಿನಯವ ಬೆರೆಸಿದೊಡೆ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೧೧೪

ತಪ್ಪುವುದು ಪ್ರಕೃತಿಯ ಸಹಜ ಗುಣ;
ತಪ್ಪೊಪ್ಪಿ ಮುನ್ನಡೆವುದು ಸತ್‌ಕೃತಿಯ ಗುಣವಯ್ಯಾ !
ತಪ್ಪಿಯೂ ಒಪ್ಪಿಕೊಳದಿರುವುದು
ವಿಕೃತಿಯ ಕಾನನವ ಹೊಕ್ಕಂತೆ, ನೋಡಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೧೧೫

ತಿಳಿದವರು ತಿಳಿಯದವರನು
ತಿಳಿಯದಂತೆ ಮರಳುಗೊಳಿಸುತಿಹರು,
ಬೆಲೆಯಿಲ್ಲದೀ ತಿಳುವಳಿಕೆಯುವರು
'ಪಯೋಮುಖದ ವಿಷಕುಂಭ'ದಂತೆ. ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೧೧೬

ಗುರುನಿಂದೆ–ಜಂಗಮನಿಂದೆಗಳ ಕೇಳಿಸದಿರಯ್ಯಾ?
ದೋಷವನು ದೂಷಿಸಬೇಕಲ್ಲದೆ
ಸ್ಥಾನವ ದೂಷಿಸಿದೊಡೆ ಬರುವುದೇನಯ್ಯಾ ?
ದಾರಿಯಲ್ಲಿಹ ಕಸವ ತೆಗೆಯಬೇಕಲ್ಲದೆ
ದಾರಿದೀಪಂಗಳ ತೆಗೆದೊಡೆ
ಕತ್ತಲೆಯ ನಂಟಲ್ಲದೆ, ಮತ್ತೇನು ಕಾಣ್ಬುದು ಹೇಳಾ

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೧೧೭

ಶರಣರ ಸೂಳ್ನುಡಿಯು ಹರನಡಿವಿಡಿಯಲು
ಚೆನ್ನುಡಿ ನೋಡಾ !
ಶರಣರ ಸಹವಾಸವು ಮರೆವನು ಹುರಿಯಲು
ಚಿದ್ವಿಕಾಸ, ನೋಡಾ !
ಶರಣರ ಪ್ರೇಮವು ಶಿವಾನುಭವವನರಿಯಲು
ನಿಜಧಾಮ ನೋಡಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,
ನಿನ್ನ ಕರುಣೆಯೆನಗೆ ಮರುಜೀವಣಿ, ನೋಡಾ ಪ್ರಭುವೆ !

## ೧೧೮

ಹೃದಯ-ಶ್ರೀ ಇಲ್ಲದ ಸಂಪದವು
ಪರಿಮಳವ ಬೀರದ ಪೂಮಾಲೆ, ನೋಡಾ !
ಆತ್ಮ-ಶ್ರೀ ಇಲ್ಲದ ವಿದ್ಯೆ
ಗುರುವಿಲ್ಲದ ಮಠ, ನೋಡಾ !
ಭಾವ-ಶ್ರೀ ಇಲ್ಲದ ಪೂಜೆ
ನಾದ ಹೊರಡದ ಗಂಟೆ, ನೋಡಾ !
ಇಂತೀ ಶ್ರೀ-ತ್ರಯವ ಕರುಣಿಸಯ್ಯಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಹಿರಿಯರು ಹಿರಿಯರೆಂದೆನ್ನುತಿಹರು
ಕಿರಿಯರನು ತುಳಿಯುತಕ್ಕವರು ಹಿರಿಯರೆ ?
ಗುರುಗಳು ಗುರುಗಳೆಂದೆನ್ನುತಿಹರು
ಶರಣರನು ಜರೆಯುತಕ್ಕವರು ಗುರುಗಳೆ ?
ವಿರತರು ವಿರತರೆಂದೆನ್ನುತಿಹರು
ರತಿ ಮೋಹ ಇದ್ದವರು ವಿರತರೆ ?
ತಪಸಿಗಳು ತಪಸಿಗಳೆಂದೆನ್ನುತಿಹರು
ರಾಗ ಕೋಪ ಬಿಡದವರು ತಪಸಿಗಳೆ ?
ಭಕ್ತರು ಭಕ್ತರೆಂದೆನ್ನುತಿಹರು
ಭಕ್ತಿಯಿಂ ಪೂಜಿಸದವರು ಭಕ್ತರೆ ?

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ನಿನ್ನ ನೆನೆಯದ ಇವರೆಲ್ಲರು
ಮತಿಗೆಟ್ಟ ಭವಭಾರಿಗಳಲ್ಲವೆ, ಹೇಳಾ !

# ೧೨೦

ತಾನಾರೆಂಬಂದನರಿಯದೆ,
ಮನದ ಮಾಲಿನ್ಯವ ಕಳೆಯದೆ,
ಮತ್ತೊಬ್ಬರ ಮನವ ಮರುಗಿಸಿದರೇನಯ್ಯಾ ?
ಜವುಳುವಿನಲಿ ಬಿತ್ತಿದ ಬೀಜ
ಫಲವ ನೀಡುವುದೆಂತಯ್ಯಾ ?
'ಮುಕ್ತಿ–ಮುಕ್ತಿ' ಎಂದು
ಬಡಬಡಿಸಿದರೇನಯ್ಯಾ ?
ಆತ್ಮ ಶಕ್ತಿಯಿಲ್ಲದೆ
ಮುಕ್ತಿ ದೊರೆವುದೆಂತಯ್ಯಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,

# ೧೨೧

ಮಾಡುವ ಕೃತಿಯಲ್ಲಿ ನಿಃಸ್ವಾರ್ಥವಿದ್ದರೆ,
ಅದೇತರ ಆಳುಕಯ್ಯಾ ?
ನೋಡುವ ದೃಷ್ಟಿಯಲ್ಲಿ ನಿರ್ಮಲತೆಯಿದ್ದರೆ,
ಅದೇತರ ಭಯವಯ್ಯಾ ?
ಆಡುವ ವಚನದಲ್ಲಿ ನಿರ್ವಂಚನೆಯಿದ್ದರೆ,
ಅದೇತರ ಭೀತಿಯಯ್ಯಾ ?
ನೀಡುವ ದಾನದಲ್ಲಿ ನಿರಾಶೆಯಿದ್ದರೆ
ಅದೇತರ ಅಂಜಿಕೆಯಯ್ಯಾ ?

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೧೨೨

ಹೃದಯ-ಕ್ಷೇತ್ರವ ಹಸನುಗೊಳಿಸದೆ
ಸದ್‌ಗುಣ-ಬೀಜವ ಬಿತ್ತುವ ಪರಿಯಂತೋ ?
ಅಹಂಕಾರ-ಮಮಕಾರಗಳ ಕರಿಕೆಯು ಬೆಳೆಸಿದೊಡೆ,
ಪರತತ್ತ್ವದ ಬೆಳೆಯನುಣ್ಣುವ ಪರಿಯಂತೋ ?

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ನಿನ್ನ ಮರೆತವರು ಮರುಳಾಗುವರಯ್ಯಾ ;
ನಿನ್ನ ಜರೆದವರು ಜಂಜಾಟಕೀಡಾಗುವರಯ್ಯಾ;
ನಿನ್ನ ನೆನೆದವರು ನೆಮ್ಮದಿ ಹೊಂದುವರಯ್ಯಾ,

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ವಿದ್ಯಾರ್ಥಿಯು ಸತ್ಯಾರ್ಥಿಯಾಗಲು
ಸತ್ಯದ ಹೆದ್ದಾರಿಯಲಿ ಸಾಗಬೇಕಯ್ಯಾ;
ಕೈ ಮುಗಿದು ಪ್ರಾರ್ಥಿಸಿದೊಡೆ
ಗುರು ಪ್ರೇಮ ದೊರೆಕೊಳ್ವುದಲ್ಲದೆ,
ಎದೆ ಸೆಟೆಯಿಸಿ ಕುಳಿತರೆ,
ಗುರು ಕರುಣೆ ದೊರಕೊಳ್ವುದೇನಯಾ ?
ಒಳ–ಹೊರಗಿನ ಸುಧಾರಣೆಯು
ವಿದ್ಯೆಯಂ ಒಳಗುಟ್ಟಲ್ಲದೆ
ಪದವಿ–ಸೇವೆಗಳ ಸಂಪಾದನೆಸಂಪಾದನೆಯಂಲ್ಲ !
ವಿನಯವಿಲ್ಲದ ದೇಹದಂತೆ;
ಭಾವವಿಲ್ಲದ ಪದ್ಯದಂತೆ, ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

# ೧೨೫

ಸಂಸ್ಕೃತಿಗೆ ಶೀಲವೆ ಮೂಲ, ಕಾಣಿರೋ !
ಸತ್‌ಕೃತಿಗೆ ಭಾವವೆ ಮೂಲ, ಕಾಣಿರೋ !
ಸದ್‌ವಿದ್ಯೆಗೆ ವಿನಯವೆ ಮೂಲ, ಕಾಣಿರೋ !
ಸದ್‌ಧರ್ಮಕೆ ದಯವೆ ಮೂಲ, ಕಾಣಿರೋ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರನ ಕೃಪೆಗೆ
ಸದ್‌ಭಕ್ತಿಯೇ ಮೂಲ ಕಾಣಿರೋ !

# ೧೨೬

ಆರು ಮೆಟ್ಟಲು ಮುಟ್ಟಲು
ಆರು ಅರಾತಿಗಳ ಮೆಟ್ಟಿ ನಿಲ್ಲಬೇಕು. ನೋಡಾ !
ಆತ್ಮ-ಶುದ್ಧಿಯು ಲೌಕಿಕ ಬುದ್ಧಿ ಆವಿರ್ಭವಿಸಿದವಗಲ್ಲದೆ,
ಷಟ್‌ಸ್ಥಲದ ಸಿದ್ಧಿ ಆದಾರಿಗೂ ಅಳವಡದು, ನೋಡಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,

## ೧೨೭

ತ್ಯಾಗಂಗಳಲಿ ಸ್ವಾರ್ಥ-ತ್ಯಾಗವೆ ಹೆಚ್ಚಿನದು, ಕಾಣಾ !
ರಾಗಂಗಳಲಿ ಶಿವಾನುರಾಗವೆ ಮಿಗಿಲು, ಕಾಣಾ !
ಭೋಗಂಗಳಲಿ ಲಿಂಗೋಪಭೋಗವೆ ಮೇಲು, ಕಾಣಾ !
ಯೋಗಂಗಳಲಿ ಶಿವಯೋಗವೆ, ಅಧಿಕ, ಕಾಣಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

# ೧೨೮

ಜ್ಞಾನವಿಡಿದು ನಡೆವುದೆ ಕ್ರಿಯಾ-ಯೋಗವಯ್ಯಾ !
ಕ್ರಿಯೆವಿಡಿದು ನುಡಿವುದೆ ಜ್ಞಾನ ಯೋಗವಯ್ಯಾ !
ಜ್ಞಾನಬಿಟ್ಟು ಕ್ರಿಯೆಯಿಲ್ಲ ; ಕ್ರಿಯೆಬಿಟ್ಟು ಜ್ಞಾನವಿಲ್ಲ ;
ಜ್ಞಾನ-ಕ್ರಿಯೆಗಳೆರಡು ಅಧ್ಯಾತ್ಮ-ನಾಣ್ಯದ
ಇಮ್ಮೈ, ನೋಡಾ !
ಅನ್ಯೋನ್ಯ-ಅವಿನಾಭಾವ ಸಂಬಂಧದಿಂದ
ಅವೆರಡರದು ಒಮ್ಮೈ, ನೋಡಾ !
ಜ್ಞಾನ-ಕ್ರಿಯೆಗಳ ಸಮರಸವೆ
ಪ್ರದೀಪ್ತಿಯ ಪ್ರವಾಳ ;
ಜೀವನ್ಮುಕ್ತಿಗೆ ಜೀವಾಳ, ಕಾಣಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

# ೧೨೯

ಸಂಸ್ಕಾರವಿಲ್ಲದ ಮನುಜನು ಗುರುವಾದಡೇನು ?
ಜಂಗಮನಾದಡೇನು ?
ಭಯ ಹೋಗದು ; ಭವ ನೀಗದು !
ಸಂಸ್ಕಾರವಿಲ್ಲದ ಶಿಲೆ ಲಿಂಗವೆಂತಾಗುವುದೋ ?
ಸಂಸ್ಕಾರಗೊಳ್ಳದ ಲಿಂಗವು
ಲಿಂಗವಂತನದೆಂತಾಗುವದೊ ?
ನೀತಿಯ ತಳಹದಿಯ ಮೇಲೆ ನಿಲ್ಲದ ರಾಜ್ಯಮಂದಿರ
ಎನಿತು ಹಿರಿದಾದರೇನು ?
ಹೆಸರಾದರೇನು ?
ಕಾಲ ಕಾಲಕೆ ಕುಸಿಯದೆ ಬಿಟ್ಟೀತೆ ?

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ನ್ಯಾಯಶಾಲಯಂಗಳು
ಸತ್ಯಕ್ಕೆ ಜಯು ನೀಡುವಂತಿರಬೇಕು ;
ಪ್ರಾಮಾಣಿಕತೆಗೆ ಒರೆಗಲ್ಲಿನಂತಿರಬೇಕು ;
ನಿಜ ನಿರ್ಣಯದ ಟಂಕಸಾಲೆಗಳಂತಿರಬೇಕು
ನ್ಯಾಯಾಲಯುವೊಂದಾದರೂ
ಮಾಯಾಲಯುವಾಗಿರಬಾರದು ;
ಅನ್ಯಾಯದಾಲಯು ಆಗಿರಬಾರದು, ನೋಡಾ !
ಸಟೆಗೆ ದಿಟದ ಬಟ್ಟೆಯು ಹೊದಿಸಿ,
ದಿಟಕೆ ಸಟೆಯು ವಸ್ತ್ರವ ಹೊದಿಸಿ
ಅಯಥಾರ್ಥವನುಕರಿಸಿ
ವಿಲಂಬವಾಗಿ ನಿರ್ಣಯವ ನೀಡುವ
ನ್ಯಾಯಶಾಲಯಂಗಳು
ನ್ಯಾಯು-ನಟನಾ-ನಿಲಯಂಗಳಲ್ಲದೆ
ಮತ್ತೇನು, ಹೇಳಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಸುಂದರ ಬಂಧುರ ಕಲ್ಗಳನಿಟ್ಟು
ಕುಟ್ಟಿದ ಗಚ್ಚನು ತೇಪೆಯೊಳಿಟ್ಟು
ಶ್ರೀಮಠ ಗೋಪುರವ ಕಟ್ಟುತಿಹೆನು, ನೋಡಾ !
ಕಂಬಗಳಾರನು ಮಧ್ಯದಲ್ಲಿಟ್ಟು
ತೊಲೆ ಮೂವತ್ತಾರನು ಮೇಲಿಟ್ಟು
ನೂರೊಂದಡಿಯನು ತಲುಪುವ ತೆರದಿ
ರಮಣೀಯ ದ್ವಾರವ ರಚಿಸುತಿಹೆನು, ನೋಡಾ !
ಕತ್ತೆತ್ತಿ ನೋಡಿದೊಡೆ
ಕಾಂಬುದು ಕಮನೀಯ ಶಿಖರ, ನೋಡಾ !
ಈ ದ್ವಾರದೊಳೇರಲು ಶಕ್ತಿ-ಸಾಮರ್ಥ್ಯವ
ಪಡೆದಿರಬೇಕಯ್ಯಾ !
ಬಾಗುತ ನಡೆದಂತೆ, ಬಾಗಿಲು ತೆರೆದಂತೆ
ಮಹಡಿಗಳಾರರ ಮೆಟ್ಟಿಲಪೇರುತ
ಹಿರಿ ಗುರಿ ಮುಟ್ಟಲು ಸಾಧ್ಯವಾಗುವುದಯ್ಯಾ !
ಶಿವ ಸಿದ್ಧಾಂತವು ಸಿದ್ಧಿಸದವರಿಗೆ 'ಮಹಾದ್ವಾರ'ದ ಮಹತಿ
ಮನದಟ್ಟಾಗುವುದೆಂತಯ್ಯಾ ?

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

# ೧೩೨

ಸಮತೆ-ಸಮತೆ ಎಂದೆಂಬಿರಿ,
ಸಮತೆಯ ರಹಸ್ಯವನರಿಯದೆ ಹೋದಿರಲ್ಲ !
ಸಮತೆಯೆಂತೆಂದೊಡೆ, ಮೊಗ್ಗರಳಿ ಹೂವಾದಂತೆ;
ಅರಳಿದ ಹೃದಯದಿಂದ ಉಕ್ಕಿ ಬರಬೇಕು, ಸಮತೆ!
ತೋರಿಕೆಗಾದ ಸಮಾನತೆ
ನಾಟಕದ ಪಾತ್ರಧಾರಣೆಯಂತಹುದಯ್ಯಾ !
ಅಂತಃಕರಣ ಕಾರಂಜಿ ಪುಟಿದಂತೆ
ಸಮತ್ವದ ಸೊಬಗು ಶೋಭಿಸಬೇಕಯ್ಯಾ !
ಕೃತ್ರಿಮತೆಯ ಸಮತೆ
ಕೋಲ್ಮಿಂಚಿನಂತೆ ತೋರಿ ಮಾಯವಾಗುವುದಯ್ಯಾ !
ಹೃದಯ-ವೈಶಾಲ್ಯವಿಲ್ಲದ ಸಮತ್ವ
ಹದಗೊಳಿಸದ ಹೊಲದಂತೆ ವ್ಯರ್ಥ, ಕಾಣಯ್ಯಾ !
ಭಾವೈಕ್ಯವಿಲ್ಲದ ಸಮಾನತೆ
ಶುದ್ಧವಾಗದ ಲಿಂಗದಂತೆ ನಿರರ್ಥಕ, ನೋಡಯ್ಯಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ವಂಚಕರಿಗೆ ವಂಚಿಸುವುದೆ ಗುರಿಯಲ್ಲದೆ,
ನಿರ್ವಂಚನೆಯ ಪರಿ ತಲೆದೋರುವುದೆಂತಯ್ಯಾ !
ಭಾವೈಕ್ಯದ ಭಯಕೆಯು
ಬುದ್ಧಿಗೆ ವಿಭ್ರಮುಗೊಳಿಸುತಿಹುದಯ್ಯಾ !
ಸಮತೆಯೆಂಬ ಬೇಲಿಯನಿಕ್ಕಿ
ಭಾವೈಕ್ಯವೆಂಬ ಹಣ್ಣು ತೋರಿ
ಮಾತಿನಲಿ ಮರುಳುಗೊಳಿಸುವವರ ಕಂಡು,
ಬೆರಗಾದೆನಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೧೩೪

ಮಾತಿನಂತೆ ಮನವಿಲ್ಲದ ಮನುಜರ ಕಂಡು
ಮನ ಮರುಗಿತ್ತಯ್ಯಾ !
ಮೈ-ಮನ ತೊಳೆಯಲು, ಮಾತೇ ಮೂಲ ಕಾಣಯ್ಯಾ!
ಮನ-ಮೈ ತೊಳೆಯಲು ಮಾತೇ ಶೂಲ ಕಾಣಯ್ಯಾ !
"ಮಾತು ಆಡಿದರೆ ಹೋಯ್ತು"
ಮುತ್ತು ಒಡೆದರೆ ಹೋಯ್ತು"
ಮಾತು ಅಧರಕ್ಕೆ ಕಹಿಯಾದರೂ !
ಉದರಕ್ಕೆ ಸಿಹಿ ಆಗಿರಬೇಕಯ್ಯಾ !
ಇಂತಪ್ಪ "ಮಾತೆ ಜ್ಯೋತಿರ್ಲಿಂಗ"ವಪ್ಪುದಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೧೩೫

ಒಳಗೊಂದು ಹೊರಗೊಂದು ನೀತಿ ರೀತಿಯಾದೊಡೆ
ಭಾವೈಕ್ಯ ಸಾಧಿಸುವುದೆಂತಯ್ಯಾ ?
ಪಕ್ವವಾಗದ ಹಣ್ಣ ಹರಿದುಕೊಂಡೊಡೆ
ಮಧುರ ರುಚಿ ಬರ್ಪುದೆಂತಯ್ಯಾ !
ಹೃದಯ ಪರಿಶುದ್ಧಿಯ ಮಾಡಿಕೊಂಡವಗೆ
ಭಾವೈಕ್ಯ ಸಂಸಿದ್ಧಿ ನಿಶ್ಚಿತ ಕಾಣಾ

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಹೃದಯ-ಹೃದಯ ಕೂಡಲು
ಮತ್ತೊಬ್ಬರೇಕೆ ಬೇಕಯ್ಯಾ !
ತಾನುಂಬ ಊಟ ರುಚಿಸಲು
ತಾ ಮಾಡಬೇಕಲ್ಲದೆ,
ಮತ್ತೊಬ್ಬರೇಕೆ ಬೇಕಯ್ಯಾ ?
ತನ್ನಂತರಂಗವ ತಾನರಿಯಲು
ಬೇರೊಬ್ಬರೇಕೆ ಬೇಕಯ್ಯಾ ?
ತನ್ನ ತಪ್ಪು ತಾ ತಿದ್ದಿಕೊಳ್ಳಲು
ಬೇರೊಬ್ಬರೇಕೆ ಬೇಕಯ್ಯಾ ?
ಗುರು-ವಿರಕ್ತರೀರ್ವರು ತಾವ್-ತಾವೆ ಒಂದಾಗಿ
ಸಮಾಜ ವೃಕ್ಷವ ಬೆಳೆಸುತಿರೆ,
ಇನ್ನೊಬ್ಬರದೆಲ್ಲಿಯ, ಆತಂಕವಯ್ಯಾ ?

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಮೇಲು ಕೀಳೆಂಬ ಬೇಲಿಯು ತೆಗೆದು
ಸಂಪ್ರದಾಯವೆಂಬ ಗೋಡೆಯನೊಡೆದು
ಜಾತಿ–ವಿಜಾತಿಯೆಂಬ ಕೀಲಿಯ ಮುರಿದು
ಧರ್ಮದ ಬಾಗಿಲ ತೆರೆಯಬೇಕೆಂಬರು, ನೋಡಾ ಕೆಲವರು!
ಸತ್ಯತೆಯನು ಮಾತಿನಲ್ಲಿಟ್ಟು
ಜಾತಿಯನು ಮತಿಯೊಳಗಿಟ್ಟು
ಧರ್ಮದಾ ವೇಷವನು ತೊಟ್ಟು
ಮುಗ್ಧ ಜನರ ಮನ ಸೆಳೆವ
ಡಾಂಭಿಕರ ಕಂಡು ನಗುವನಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ!

೧೩೮

ಕೂಡಿದರೆ ಕೂಡಬೇಕು,
ವೈರಿ ವೈರವ ತೊರೆದಪ್ಪಿಕೊಳುವಂತೆ ;
ಹಾಡಿದರೆ ಹಾಡಬೇಕು,
ಪಶುವಾದರು ನಿಂತು ಆಲಿಸುವಂತೆ;
ಇಷ್ಟಾರ್ಥ ಬೇಗ ಸಿದ್ಧಿಸುವಂತೆ;
ನೆನೆದರೆ ನೆನೆಯಬೇಕು

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರನು
ಒಲಿದು ಬಂದು ಹರಿಸುವಂತೆ !!

## ೧೩೯

ದೀಪಾವಳಿಯು ಸಂಭ್ರಮವ ನೋಡ ಬನ್ನಿರಯ್ಯಾ ;
ಎತ್ತ ನೋಡಿದಡತ್ತ ಸಾಲು ದೀವಿಗೆ ಕಾಣುತಿಹವಯ್ಯಾ;
ಒಳಗೊಳಗೆ ಹೋದಡೆ,
ತೈಲ ದೀಪಂಗಳು ತೋರುತಿಹವಯ್ಯಾ
ನಿಜ ಭಕ್ತಿ ತೈಲವನೆರೆದು, ಜ್ಞಾನ ಬತ್ತಿಯ ಹಚ್ಚಿದೊಡೆ
ಗರ್ಭಗುಡಿಯೊಳಗಿಹ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರನ ಚಿತ್‌ಸೂರ್ಯ

ತಾನೆ ತಾನಾಗಿ ಬೆಳಗುತಿಹನಯ್ಯಾ !

## ೧೪೦

ಆತ್ಮ ಶುದ್ಧಿಯಿಲ್ಲದ ಭಾವೈಕ್ಯವು
ನೀರೆರೆಯದ ತರುವಿನಂತೆ, ನೋಡಾ !
ಆತ್ಮ ಶುದ್ಧಿಯಿಲ್ಲದ ಸಮತೆ
ಭದ್ರತೆಯಿಲ್ಲದ ಸ್ತಂಭದಂತೆ, ನೋಡಾ !
ಆತ್ಮ ಶುದ್ಧಿಯಿಲ್ಲದ ಜೀವನ
ಕಸವ ತೆಗೆಯದ ಹೊಲದಂತೆ, ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೧೪೧

ಶಿವಯೋಗ ಮಂದಿರವೆಂಬುದೊಂದು,
ಆಧ್ಯಾತ್ಮ-ಕೇಂದ್ರವಾಗಿಹುದಯ್ಯಾ :
ಹೃದಯಾರವಿಂದವನರಳಿಸಿ ಕೊಳ್ವರಿಗೆ
ಜ್ಞಾನಭಾನುವಿನಂತಿಹುದು, ನೋಡಾ !
ಮನದ ಮಾಲಿನ್ಯವ ಕಳೆದುಕೊಳ್ವವರಿಗೆ
'ಧ್ಯಾನ ಧಾಮ'ವಾಗಿಹುದು, ನೋಡಾ !
ತನು ಮೋಹವಳಿದವರಿಗೆ
ಶಿವಯೋಗ ಮಂದಿರ ವಾಸ ಸಾರ್ಥಕ-ಸಾರ್ಥಕವಯ್ಯಾ,

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೧೪೨

ಬಹಿರ್ಮುಖದರಿವೆ, ಅಂತರ್ಮುಖದ ಕುರುಹು, ಕಾಣಾ !
ಚಂದನದ ಪರಿಮಳ ಜ್ಞಾನವಿರದವನು
ಗಂಧವ ಲೇಪಿಸುವುದೆಂತು ?
ವ್ಯವಹಾರ ಜ್ಞಾನ ಶೂನ್ಯನು
ವ್ಯಾಪಾರ ಮಾಡುವುದೆಂತು ?

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

ಬಹಿರ್ಮುಖ ನಿವೃತಿಯೆ ಪರಮ ಸಾಧನ, ನೋಡಾ !

ಮೋಹವು ಮಾನವನ ಮರುಳುಗೊಳಿಸುತಿಹುದು
ನೋಡಾ !
ಮೋಹವು ಒಳಗೊಳಗೆ ಕರುಳ ಕೊರೆಯುತಿಹುದು,
ನೋಡಾ !
ಮೋಹವು ಪರಿ ಪರಿಯಲಿ ಕಾಡುತಿಹುದು, ನೋಡಾ !
ಮೋಹವು ಅರಿವಿನರಮನೆಯ ಬಿಡಿಸುತಿಹುದು, ನೋಡಾ !
ಮೋಹವು ಸತ್ಯವನು ಮರೆಮಾಚುತಿಹುದು, ನೋಡಾ!

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,

ನಿನ್ನ ಮೋಹದಲಿರುವವರನಾರನು, ಕಾಣೆನಯ್ಯಾ ! !

ಮೌನವು ಬುದ್ಧಿ-ಶ್ರೀಯ ಬೆಳೆಯಿಸುವುದಯ್ಯಾ ;
ಮೌನವು ವೀರ-ಶ್ರೀಯ ಹೆಚ್ಚಿಸುವುದಯ್ಯಾ ;
ಮೌನವು ಆತ್ಮ-ಶ್ರೀಯ ಅರಳಿಸುವುದಯ್ಯಾ ;
ಇದು ಕಾರಣ, ಬಟ್ಟೆ ತೊಳೆದಂತೆಲ್ಲ
ಮಾಲಿನ್ಯ ಕೊಚ್ಚಿಕೊಂಡು ಹೋಗುವಂತೆ,
ಮೌನವು ಬೆಳೆ-ಬೆಳೆದು
ಹೃದ್‌ದರ್ಪಣ ಬೆಳಗುತ್ತ ಹೋಗುವುದು, ನೋಡಾ !
ಆತ್ಮ-ಶುದ್ಧಿಯಿಲ್ಲದ ಮೌನ
ಬಕ ಪಕ್ಷಿಯ ಧ್ಯಾನದಂತೆ, ಕಾಣಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ!

೧೪೫

ಅರಿವು ಆಚಾರಕ್ಕಿಳಿದರೆ
ಮರೆವು ನಷ್ಟವಾಗುವುದಲ್ಲದೆ,
ಆತ್ಮಕ್ಕೆ ಶಾಂತಿ ಸಿಕ್ಕು
ನಿಜ ಸುಖ ನಿಲುಕುವುದಯ್ಯಾ !
ಆಚಾರವಿಲ್ಲದ ಅರಿವು
ತಿಕ್ಕಲಾರದ ಪಾತ್ರೆಯಂತೆ, ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

## ೧೪೭

ಯೋಚನೆ ಬುದ್ಧಿಯು ಕೆಲಸವಾದರೆ
ಯೋಜನೆ ಹೃದಯದ ಕೆಲಸವಯ್ಯಾ !
ಯೋಚನೆ-ಯೋಜನೆಗಳೆರಡು ಜೋಡಾದರೆ,
ನೆಲವಗಿದು ಸಸಿಯನೂರಿ
ನೀರುಣಿಸಿ ಬೆಳೆದಂತೆ ಸೊಗಸಾದುದಯ್ಯಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

ವಿದ್ಯೆಯಿದ್ದಲ್ಲಿ ವಿನಯುವಿರುವುದಯ್ಯಾ !
ತುಂಬಿದಕೊಡ ತುಳುಕದು, ನೋಡಾ !
ವಿನಯುವಿಲ್ಲದ ವಿದ್ಯೆ ಒಣಗಿರ್ಪ ಮರವನೇರಿದಂತೆ,
ಒಡೆದಿರ್ಪ ಮುತ್ತ ಧರಿಸಿದಂತೆ, ಕಾಣಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ ! !

೧೪೮

ಮಾತೆಲ್ಲ ಮುತ್ತು ;
ಮನವೆಲ್ಲ ಕತ್ತಲು.
ಹೊರಗೆಲ್ಲ ಬೆಳಕು ;
ಒಳಗೆಲ್ಲ ಕೊಳಕು.
ಮುತ್ತು-ಬೆಳಕೊಂದಾಗಿ
ಮಾತು–ಮನವೊಂದಾಗಿ
ಜ್ಯೋತಿರ್ಲಿಂಗವಾದರೆ
ಅಂತಪ್ಪ ಮೂರ್ತಿಯ
ಕೀರ್ತಿಯನು ಹೊಗಳಲಳವಲ್ಲ, ಕಾಣಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ ! !

೧೮೪

ವೀರಶೈವ ಸಮಾಜವೆಂಬ ವೃಕ್ಷವು
ಪಲ್ಲವಿಸಿ ಫಲವ ನೀಡದಂತೆ
ಒಳ ಪಂಗಡಗಳೆಂಬ ಕಸ-ಕಡ್ಡಿಗಳು
ಬೆಳೆದು ಬೇರ ಬಿಟ್ಟಿಹವಯ್ಯಾ !
ಸುಧಾರಕರೆಂಬವರು ಪಂಗಡವ ಬೆಳೆಸುತ್ತ
ಮರದ ಬೇರಿಂಗೆ ಬಿಸಿನೀರ ಸುರಿಯುತಿಹರಯ್ಯಾ !
ಮಾತಿನಲಿ ವೃಕ್ಷದಾ ಹರವುದೋರಿ
ಕೃತಿಯಲ್ಲಿ ಪಂಗಡವ ಬೆಳೆಸುತಿಹ
ಜಾಣ್ಮೆ ತೋರುವರಯ್ಯಾ !
ಇದೆಂತಹ ವಿಶಾಲತೆ, ಇದೆಂತಹ ಸಮಾನತೆ !
ಇದೆಂತಹ ಮಾರ್ಗಾನುಸರಣೆ,
ಇದೆಂತಹ ಸಮಾಜ ಸುಧಾರಣೆ ! !

ಇಂತಪ್ಪವರ ನೋಡಿ ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರನು

ಗಹ ಗಹಿಸಿ ನಗುತಿಹನಯ್ಯಾ !

## ೧೫೦

ಧರ್ಮ–ಗುರುಗಳೆಲ್ಲರು ರಾಜಕಾರಣ ಸೇರಿದರೆ,
ಧರ್ಮ ಬೆಳಗುವುದೆಂತಯ್ಯಾ ?
ರಾಜ್ಯ ಸೂತ್ರವ ನಡೆಸುತಿಪ್ಪವಗೆ ಧರ್ಮ ಸೇರದಿದ್ದರೆ,
ರಾಜ್ಯ ಬೆಳಗುವುದೆಂತಯ್ಯಾ ?
ಒಂದು ಬಿಟ್ಟು, ಒಂದು ಬೆರೆತರೆ
ವಿಶ್ವ ಶಾಂತಿ ಸಾಧ್ಯವಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗ್ಗುರು ಗುರುಸಿದ್ಧೇಶ್ವರಾ.

ತ್ರಿದಳವಲ್ಲದ ಪತ್ರಿ,
ಹಿಡಿಕೆಯಿಲ್ಲದ ಛತ್ರಿ,
ಅದೆಂತಹುದಯ್ಯಾ !
ಸೊಂಪಿರದ ಕಾಡು,
ಇಂಪಿರದ ಹಾಡು,
ಅದೆಂತಹುದಯ್ಯಾ !
ಸುಗುಣವಿಲ್ಲದ ವನಿತೆ,
ಪ್ರತಿಭೆಯಿಲ್ಲದ ಕವಿತೆ,
ಅದೆಂತಹುದಯ್ಯಾ !
ಸತ್ಯವಿರದ ಚರಿತೆ,
ಸತ್ತ್ವವಿರದ ಘನತೆ,
ಅದೆಂತಹುದಯ್ಯಾ !
ವಿತರಣವಿರದ ವಿತ್ತ,
ಸಂಯಮವಿರದ ಚಿತ್ತ,
ಅದೆಂತಹುದಯ್ಯಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

೧೫೨

ಶಾಂತಿಯಿಲ್ಲದ ವ್ಯಕ್ತಿ
ಶಾಂತಿಯಿಲ್ಲದ ರಾಷ್ಟ್ರ
ಜಲವಿಲ್ಲದ ತಟಾಕದಂತೆ ವ್ಯರ್ಥ, ಕಾಣಯ್ಯಾ !
ಶಾಂತಿಯಿಲ್ಲದೇ ಧರ್ಮವಿಲ್ಲ ;
ಧರ್ಮವಿಲ್ಲದೇ ಶಾಂತಿಯಿಲ್ಲ
ಇವೆರಡು ಓತ-ಪ್ರೋತವಾಗಿ
ಹೆಣೆದುಕೊಂಡಿಪ್ಪುವು, ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

ಸಮಯ ಭೇದಂಗಳಿಂದ
ಸಮಯ-ಭಿತ್ತಿ ಹಾಳಾಗುವುದಲ್ಲದೆ,
ಸಮಾಜ-ಭವನ ಸಡಿಲಾಗುವುದು, ನೋಡಯ್ಯಾ !
ಸತ್ಯವೆಂಬ ಸಮಯದ ಮೇಲೆ
ಸಮತೆಯೆಂಬ ಪ್ರಣತೆಯನಿರಿಸಿ,
ಪ್ರೇಮವೆಂಬ ಎಣ್ಣೆಯನೆರೆದು,
ಸಹಕಾರವೆಂಬ ಬತ್ತಿಯನಿಟ್ಟು,
ಜ್ಞಾನವೆಂಬ ದೀಪವ ಹಚ್ಚಿದರೆ
ಸಮಯ ಭೇದ ನಿರಸನದ ಬೆಳಕು ತೋರಿ
ಬೆಳಗಿನೊಳಗಣ ಬೆಳಗಾಗಿ ಪ್ರಜ್ವಲಿಸುವುದಯ್ಯಾ,

.ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

## ೧೫೪

ಮೂರು ಲೋಕಂಗಳಲಿ
ಮೂರು ಕಾಲಂಗಳಲಿ
ಮೂರವಸ್ಥೆಗಳಲಿ
ಸಾವು ಇರದ ಮಠವೆ
" ಮೂರು ಸಾವಿರದ ಮಠ " ವಯ್ಯಾ !
ಮೂರಳಿದು ಮೂರರಿದರೆ
ಮಠ 'ದ್ವಾರ' ದೊರೆವುದಯ್ಯಾ !
ತನು-ಮನ-ಭಾವ ಶುದ್ಧರಿಗೆ
ಮಠದೊಳಗಣ ಜ್ಯೋತಿ ಕಾಂಬುದಯ್ಯಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

# ೧೫೫

ನ್ಯಾಯವ ನೀಡುವ ನ್ಯಾಯಾಧೀಶನು
ನ್ಯಾಯ-ನಿಷ್ಠುರಿಯಿರಬೇಕಲ್ಲದೆ,
ಅಸತ್ಯ-ಅನ್ಯಾಯಂಗಳಿಗವಕಾಶವೀಯಬಾರದು, ನೋಡಾ!
ನೀಡಿದ ನಿರ್ಣಯವು ಸುವರ್ಣಾಕ್ಷರದಲಿ
ಸಾದರದಿಂದ ಬರೆದಿಡುವಂತಿರಬೇಕಯ್ಯಾ
ದೇವ ಬಂದರೂ, ಅಹುದಹುದೆಂದು
ಮೆಚ್ಚುವಂತಿರಬೇಕಯ್ಯಾ

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೧೫೬

ಜಾತಿಗಾರರಂತೆ ವೇಷವ ಹಾಕಿ
ಮತ್ತೊಬ್ಬರನು ಮೋಸಗೊಳಿಸುವರ ನೋಡಿ
ಅಚ್ಚರಿಯಹಾಗುತಿಹುದಯ್ಯಾ !
ನಿಚ್ಚಳ ನಡೆ-ನುಡಿಯು ಮನವ ತೋರದವರ
ಮೆಚ್ಚನಯ್ಯಾ

ನಮ್ಮ ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರನು.

೧೫೭

'ಆರೇನಂದರೂ ಓರಂತಿಪ್ಪುದೇ ಸಮತೆ' ಎಂದುದಾಗಿ
ಹಿರಿಯುರಾವ ಪರಿಯಲಿ ಕರೆದರೂ
ಅದೇ ಮಮತೆ !
ಒಳ-ಹೊರಗಿರುವ ಹಗೆಗಳನಳಿದು
ಬೆಳಗುವುದೆ ಚಿನ್ಮಯತೆ !
ಲಿಂಗದೊಳಗೇಕಾಗ್ರ ದೃಷ್ಟಿಯುನಿರಿಸಿ
ಬೆರೆಯುವುದೆ ತನ್ಮಯತೆ, ಕಾಣಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

# ೧೫೮

ದೊಡ್ಡ ಮೀನು ಸಣ್ಣ ಮೀನವ ನುಂಗುವಂತೆ
ದೊಡ್ಡವರೆಂದು ಹೇಳಿಕೊಳ್ಳುವವರು
ಸಣ್ಣವರನು ನುಗ್ಗು-ನುಸಿ ಮಾಡುತಿಹರಯ್ಯಾ !
ಅಧಿಕಾರದ ದರ್ಪವ ತೋರಿ
ಅನಧಿಕೃತ ಚೇಷ್ಟೆಯಮಾಡುವರ ಬಾಯಲಿ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರನು
ಹುಡಿಮಣ್ಣ ಹೊಯ್ಯದೆ ಮಾಣ್ಬನೆ ?

# ೧೫೯

ವಿಶೇಷ ರಕ್ತಿವುಳ್ಳವರು ವಿರತರೆಂದರೆ, ವಿರತರಪ್ಪರೆ ?
ಆಶೆಯ ಹರಿಯದೆ, ರೋಷವ ತರಿಯದೆ
ವಿರತರೆಂದರೆ, ವಿರತರಪ್ಪರೆ ?
ಕರಣವ ಖಂಡಿಸದೆ, ದೇಹವ ದಂಡಿಸದೆ
ವಿರತರೆಂದರೆ, ವಿರತರಪ್ಪರೆ ?
ಲಿಂಗವನರ್ಚಿಸದೆ, ಭಾವವ ಪೆರ್ಚಿಸದೆ
ವಿರತರೆಂದರೆ, ವಿರತರಪ್ಪರೆ ?
ಲೌಕಿಕದಲಿಪ್ಪಂತೆ ತೋರಿದರು
ಕಮಲ-ಪತ್ರದಂತೆ ನಿರ್ಲಿಪ್ತರಾಗಿಹ
ವಿಗತ-ರಕ್ತಿಯುಳ್ಳ ವಿರತರೆ, ವಿರತರು ನೋಡಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

೧೬೦

ಬೇಕೆಂದಾಗ ಮೇಲೆತ್ತುವುದು
ಬೇಡೆಂದಾಗ ನೆಲಕೊತ್ತುವುದಿದು ಪತ್ರಿಕಾ ಧರ್ಮವೇನಯ್ಯಾ !
ಸಮದೃಷ್ಟಿ ಸಮಭಾವ ಕಂಡರಿದು
ಮನಮೆಚ್ಚಿ ಬರೆಯುವುದೇ ಪತ್ರಿಕಾ-ಧರ್ಮವಯ್ಯಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೧೬೧

ಅನುಭವವಿಲ್ಲದ ಭಾಷೆ,
ಅನುಭವವಿಲ್ಲದ ಜ್ಞಾನ
ಅನುಭವವಿಲ್ಲದ ಧ್ಯಾನ
ಅನುಭವವಿಲ್ಲದ ಮೌನ
ಗುಡ್ಡಕ್ಕೆ ಕಲ್ಲು ಹೊತ್ತಂತೆ ; ಕಾಣಯ್ಯಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಧರ್ಮ ರಕ್ಷಣೆಯು ಶಾಲೆ 'ಕಾಲೇಜು'ಗಳಿಂದಾಗದೆಂದು
ನುಡಿಯುತಿಹರು, ಕೆಲಬರು !
ಧರ್ಮ ರಕ್ಷಣೆಯು
ಪಾಠ ಪ್ರವಚನಗಳಿಂದಾಗದೆಂದಾಡುತಿಹರು ಕೆಲಬರು !
ಧರ್ಮ ರಕ್ಷಣೆಯು
ಜಪ ತಪಾದಿಗಳಿಂದಾಗದೆಂದೆನ್ನುತಿಹರು ಕೆಲಬರು !
ಮಾಡುವ ಮಾಟ
ನೋಡುವ ನೋಟ
ಕೂಡುವ ಕೂಟ, ಪರಿಶುದ್ಧವಿರಬೇಕಲ್ಲದೆ,
ಮೂರನೂ ಬೇರೆ ವಿಂಗಡಿಸಿದೊಡೆ
ಧರ್ಮದ ರಕ್ಷಣೆ ಸಾಧ್ಯವದೆಂತಯ್ಯಾ ?

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,
ಹೇಳುವ ಪರಿ ಬೇರೆಯಾದರೂ
ಗುರಿಯು ಗುರಿಯೊಂದೇ ಕಾಣಯ್ಯಾ !

೧೬೩

ಅಧ್ಯಯನ, ಅಧ್ಯಾಪನ, ಅಭ್ಯಾಸಂಗಳಲಿ
ಒಂದ ಬಿಟ್ಟು, ಒಂದ ಮಾಡಲು ಸಲ್ಲದು ನೋಡಯ್ಯಾ,
ಮನೆಯು ಕಟ್ಟಲು ಕಲ್ಲು-ಕಬ್ಬಿಣ,
ಗಚ್ಚು–ಗಾರೆ ಬೇಕಾಗುವಂತೆ
ಧರ್ಮ ಸೌಧವ ತಿದ್ದಿ ರಕ್ಷಿಸಲು
ಶಿಕ್ಷಣ-ಪ್ರಶಿಕ್ಷಣ, ಪಾಠ–ಪ್ರವಚನ, ಜಪ–ತಪಂಗಳು
ಅವಶ್ಯವಿರಬೇಕಯ್ಯಾ,

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೧೬೪

ಭೂಮಿಯಿದೆ ನೀರಿಲ್ಲ ;
ನೀರಿದೆ ಭೂಮಿಯಿಲ್ಲ–
ಇದು ದೇಶ ವೈಚಿತ್ರ್ಯ ನೋಡಾ !
ಕಡಲೆಯಿವೆ ಹಲ್ಲಿಲ್ಲ,
ಹಲ್ಲಿವೆ ಕಡಲೆಯಿಲ್ಲ,
ಧನವಿದೆ ದಾನವಿಲ್ಲ,
ದಾನವಿದೆ ಧನವಿಲ್ಲ,
ಇದು ಜೀವನ ವೈಚಿತ್ರ್ಯ, ನೋಡಾ !
ಇದು ಸ್ವಭಾವ ವೈಚಿತ್ರ್ಯ, ನೋಡಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,

ನಿನ್ನ ನೆನೆಯಲು ಮನವಿದೆ;
ಮನದ ನೆಲೆ ತಿಳಿಯಲಾರದು, ನೋಡಾ !

ಮಂಜುನಾಥನಾದ ನೀನು ಶಿವಲಿಂಗರೂಪವಂತೆ;
ನಿನ್ನ ಪೂಜೆಗೆ ತುಳಸಿ ಪತ್ರಿ ಗಂಧ ಬೇಕಂತೆ;
ನಿನ್ನ ನಿತ್ಯದರ್ಚಕರು ಮಾಧ್ವರಂತೆ ;
ನಿನ್ನ ಸ್ಥಳದೊಡೆತನದ ಧರ್ಮಾಧಿಕಾರಿಗಳು ಜೈನರಂತೆ,
ಇದೆಂತಹ ವಿಚಿತ್ರವಯ್ಯಾ !
ಯಾರಾದರೇನಂತೆ ?
ಭಕ್ತಿಗೆ ಭಿನ್ನ-ಭೇದವುಂಟೇನಯ್ಯಾ,

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

## ೧೬೬

ಅನ್ನವ ನೀಡುವುದನು ಧರ್ಮಸ್ಥಳದಲಿ ನೋಡಿ
ಸಂತಸ ಪಡಬೇಕಯ್ಯಾ !
ಭಕ್ತಿ ಸಂಪದವನು ಧರ್ಮಸ್ಥಳದಲಿ ಕಂಡು
ಕಲಿಯಬೇಕಯ್ಯಾ !
ಸರ್ವ ಧರ್ಮ ಸಮನ್ವಯವನು ಧರ್ಮಸ್ಥಳದಲಿ ತಿಳಿದು
ನಲಿಯಬೇಕಯ್ಯಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

## ೧೬೭

ತನ್ನ ಸತಿಯ ಬಿಟ್ಟು, ಪರ ಸತಿಯ ಬಯಸಿದೊಡೆ,
ಜೀವನಕೆ ಸಮರಸವೆಂತಯ್ಯಾ !
ಹಾಲಿನಲಿ ಉಪ್ಪ ಬೆರೆಸಿದೊಡೆ,
ಕೆಡುವುದಲ್ಲದೆ ರುಚಿ ಬರುವುದೆಂತಯ್ಯಾ !
ಹೂ-ಬಳ್ಳಿಗೆ ಹುಳು ಹತ್ತಿದೊಡೆ
ಒಣಗುವುದಲ್ಲದೆ ಹೂಬಿಡುವುದೆಂತಯ್ಯಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೧೬೮

ಪ್ರಪಂಚವೆಂಬುದೊಂದು ಬೀಸುವ ಕಲ್ಲು:
ಅದರೊಳು ತಿರುಗುವ ಕಾಳುಗಳೆ ಜೀವರಾಶಿ;
ಒಳಗಿರುವ ಕಿರುಗೂಟವೆ ಪರಶಿವ ವಸ್ತು ;
ಅಂತಪ್ಪ ಕಿರುಗೂಟದಾಸರೆ ಪಡೆದು
ಬಾಳುತಿಹ ಕಾಳುಗಳೆ ಜೀವನ್ಮುಕ್ತರು. ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

## ೧೬೯

ವಿಷಯಧ್ಯಾನದಿಂದ,
ವಿಷಕಂಠನ ಮರೆತು
ವಿಷಮ ಸಂಸಾರದಲಿ ಬೆರೆತು
ದುಸ್ಸಂಗಿಗಳಾಗಿ ತಿರುಗುತ್ತಿಹರು ನೋಡಯ್ಯಾ !
ದುಸ್ಸಂಗದಿಂದ ಕಾಮದ ಬೀಜವು ಹುಟ್ಟಿ
ಕಾಮದಿಂದ ಕ್ರೋಧವು ಚಿಗುರೊಡೆದು
ಕ್ರೋಧದಿಂದ ಸಂಮೋಹವು ಬೆಳೆದು
ಸಂಮೋಹದಿಂದ ಸ್ಮೃತಿಭ್ರಂಶವು ಹಿರಿದಾಗಿ
ಸ್ಮೃತಿಭ್ರಂಶದಿಂದ ಬುದ್ಧಿಹೀನನಾಗಿ
ಈಪರಿ ಕಾಮದ ಮಹಾಮರವು ಫಲಿಸಿ,
ಬುದ್ಧಿನಾಶದಿಂದ ಸರ್ವನಷ್ಟವಾಗಿ
ಗತಿಮತಿಯಿಲ್ಲದಂತೆ, ತಲೆಕೆಟ್ಟ ಹುಚ್ಚರಂತೆ,
ಮದ್ಯಕುಡಿದ ಕಪಿಗಳಂತೆ ತಿರುಗುತ್ತಿಹರು ನೋಡಾ
ಕಾಮವೆಂಬ ವೃಕ್ಷವನು
ಜ್ಞಾನವೆಂಬ ಕೊಡಲಿಯಿಂದ ಕಡಿದೊಗೆದರೆ
ಕಾಲಕರ್ಮಂಗಳು ಬಿಟ್ಟೋಡಿ
ಶೂಲಪಾಣಿಯ ಕೃಪೆಯುಂಟಾಗುವದಯ್ಯಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

[ಗೀತಾ ಶ್ಲೋಕದ ಆಧಾರ]

## ೧೭೦

ಗುರುವು ಅಜ್ಞಾನ ತಿಮಿರವ ತೊಲಗಿಸುತಿಹ
ಚಿತ್‌ಸೂರ್ಯನು;
ಗುರುವು ಭವಸಾಗರವ ದಾಟಿಸುವ ನಾವಿಕನು;
ಗುರುವು ಜೀವ-ಭಾವವ ಕಳೆದು,
ಶಿವಭಾವ ತುಂಬುವ ಪರಶಿವನು;
ಗುರುವು, ಇಷ್ಟಾರ್ಥವ ಈಡೇರಿಸುತಿಹ ಚಿಂತಾಮಣಿಯು;
ಗುರುವು "ಲಿಂಗ–ಮಧ್ಯೇ ಜಗತ್ ಸರ್ವಂ" ಎಂದು
ಸಾರುವ ಬೋಧಕನು;
ಗುರುವು ಸದ್‌ಭಕ್ತಿ ನೆಲೆಗೊಳ್ಳುವಂತೆ
ಕೃಪೆದೋರುತಿಹ ಕಾರುಣ್ಯಮೂರ್ತಿಯು
ಇಂತಪ್ಪ ಗುರುವನು "ನ ಗುರೋರಧಿಕಂ" ಎಂದು
ಶ್ರುತಿ ಹೊಗಳುತಿದೆ, ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ ! !

೧೭೧

ಗುರುವನ್ನು ನರನೆಂದು ಭಾವಿಸಿದರೆ
ಅರಿಷ್ಟ ತಪ್ಪದು, ಕಾಣಾ !
ಗುರುದೇವನನು ಮರೆದರೆ
ಅಧ್ಯಾನ ತಪ್ಪದು, ಕಾಣಾ !
ಗುರುದೇವನನು ಜರೆದರೆ
ಅನುತಾಪ ತಪ್ಪದು, ನೋಡಾ !
ಗುರು ಕರುಣೆಯು ಪಡೆಯದಿರೆ
ಭವ-ಬಾಧೆ ತಪ್ಪದು, ನೋಡಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ!!

# ೧೭೨

ತನ್ನ ಸತ್‌ಸ್ವರೂಪವ ತೋರುವನಯ್ಯಾ, ಶ್ರೀಗುರುವು;
ತನ್ನ ಚಿತ್‌ಸ್ವರೂಪವ ತೋರುವನಯ್ಯಾ, ಶ್ರೀಗುರುವು;
ತನ್ನ ನಿಜಾನಂದವ ತೋರುವನಯ್ಯಾ, ಶ್ರೀಗುರುವು;
ತನ್ನ ನಂಬಿದ ಶಿಷ್ಯರನು ಮುಕ್ತಿ ಪಥಕೆ
ಕರೆದೊಯ್ಯುವನಯ್ಯಾ, ಶ್ರೀಗುರುವು
ಇಂತಪ್ಪ ಗುರುವಾಗಿ ಸರ್ವರನು ಸಲುಹಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

೧೭೩

ಶ್ರೀಗುರುವಿನ ಉಪದೇಶದಿಂದ
ಭವಮಾಲೆ ಹರಿವುದು, ನೋಡಾ !
ಶ್ರೀಗುರುವಿನ ಉಪದೇಶದಿಂದ
ನರ–ಜನ್ಮ ಸಮನಿಸದು, ನೋಡಾ !
ಶ್ರೀಗುರುವಿನ ಉಪದೇಶದಿಂದ
ಒಳ-ಹೊರಗು ಬೆಳಗುವುದು, ನೋಡಾ !
ಶ್ರೀಗುರುವಿನ ಉಪದೇಶದಿಂದ
ಲಿಂಗಾಂಗ ಸಾಮರಸ್ಯ ಸಿದ್ಧಿಪುದು, ನೋಡಾ

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೧೭೪

ಗುರುವಾದವನು ದುರಹಂಕಾರ-ದುರ್ಮದವ
ದೂರೀಕರಿಸಿರಬೇಕು ;
ಗುರುವಾದವನು ಆಶೆ–ಆಮಿಷವ
ಅಳಿದಿರಬೇಕು ;
ಗುರುವಾದವನು ಮಾಯಾ–ಮೋಹವ
ಮೆಟ್ಟಿರಬೇಕು ;
ಗುರುವಾದವನು ಸರ್ವ ಸಂಗ–ಪರಿತ್ಯಾಗವ
ಸಾಧಿಸಿರಬೇಕು.
ಇಂತಪ್ಪ ಸದ್‌ಗುರುವೆ ಶಿಷ್ಯನ ಭವ–ಬಂಧನವ
ಬಿಡಿಸುವನಯ್ಯಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಅಜ್ಞಾನಾಂಧಕಾರದಲಿ ಅಲೆಯುತಿಹ ಗುರುಗಳಂತಹರು
ಕುರುಡರಂತೆಯೆ ಕುರುಡು ದಾರಿಯಲಿ
ಶಿಷ್ಯರನೆಳೆಯುತಿಹರಯ್ಯಾ !!

## ೧೭೫

ಲಿಂಗವ ಧರಿಸಿದವರಿಗೆ ಭಯ-ಭಯಂಗಳಿಲ್ಲ ;
ಲಿಂಗವ ಧರಿಸಿದವರಿಗೆ ಕೋಪ-ತಾಪಂಗಳಿಲ್ಲ.
ಲಿಂಗವ ಧರಿಸಿದವರಿಗೆ ಪಾಪ–ಸೂತಕಗಳಿಲ್ಲ;
ಇದು ಕಾರಣ, ಲಿಂಗವ ಧರಿಸಿ, ಲಿಂಗ ಪ್ರಾಣವಾಗಿ
ಭಾವಲಿಂಗದಲಿ ಸಮರಸವ ಹೊಂದಬಲ್ಲವರಿಗೆ
ಪುನರ್ಜನ್ಮ–ಮರಣಂಗಳಿಲ್ಲ, ನೋಡಾ,

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

## ೧೭೬

ಮನದ ಮೈಲಿಗೆಯು ಕಳೆಯಲು
ಶರಣರ ನುಡಿಗಡಣವೆ ಮೂಲವಯ್ಯಾ !
ತನುವಿನ ಮೋಹವನಳಿಸಲು
ಅನುಭಾವಿಗಳ ಸಹವಾಸವೆ ಮೂಲವಯ್ಯ !
ಲಿಂಗಾಂಗ ಸಮರಸವನರಿಯಲು,
ಇಷ್ಟಲಿಂಗದರ್ಚನೆಯೆ ಮೂಲವಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

೧೭೭

ವೀರಶೈವರಿಗೆ ಲಿಂಗವೇ ಪಂಚ ಪ್ರಾಣವಾಗಿಹುದಯ್ಯಾ;
ತನ್ನ ತಾನರಿತುಕೊಳ್ಳಲು ಬಗೆಗನ್ನಡಿಯಾಗಿಹುದಯ್ಯಾ!
ಲಿಂಗವಿಲ್ಲದ ಹೃದಯವು ರವಿಯಿರದ ಆಗಸದಂತೆ !
ಪತಿಯಿರದ ಸತಿಯಂತೆ, ಕಾಣಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ!

## ೧೭೪

ವಿಶ್ವವನೊಳಕೊಂಡ ಲಿಂಗವು ಕರಸ್ಥಲದಲಿ ಬಂದು
ಚುಳುಕಾಗಿಹುದಯ್ಯಾ !
ಗುರು ಕರುಣಿಸಿದ ಲಿಂಗವು
ಚಿತ್‌ಕಲಾ ಪರಿಪೂರ್ಣವಾಗಿಹುದಯ್ಯಾ !
ಮಾಂಸ ಪಿಂಡವು ಹೋಗಿ, ಮಂತ್ರಪಿಂಡವಾಗಲು
ಲಿಂಗವೆ ಮೂಲ ಕಾರಣವಯ್ಯಾ,

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರನು.

## ೧೭೯

ಲಿಂಗವಿದ್ದವರು ಅಂಗಗುಣಗಳ ದಹಿಸುತಿರಬೇಕು;
ಲಿಂಗವಿದ್ದವರು ಗುರು-ಲಿಂಗ-ಜಂಗವು
ದಾಸೋಹದಲಿ ನಿಷ್ಠರಾಗಿರಬೇಕು.
ಲಿಂಗವಿದ್ದು ಮಂಗ ಗುಣ ಹಿಂಗಿರದಿದ್ದೊಡೆ

ಭ್ರೂಲತಾ ಪುರೀಶ ಕರ್ತೃ–
ಜಗದ್ಗುರು ಗುರುಸಿದ್ಧೇಶ್ವರನೆಂತೊಲಿವನಯ್ಯಾ!

೧೬೦

ಲಿಂಗವ ಧರಿಸದೆ, ಲಿಂಗ ತತ್ತ್ವವ ತಿಳಿಸಿದರೇನು !
ಗಿಳಿಯೋದಿದ ಪಾಠಬನೊಪ್ಪಿಸಿದಂತಲ್ಲವೇ, ಹೇಳಾ!
ತತ್ತ್ವದ ಬುತ್ತಿಯನು ಮಾತಿನಲಿ ತುಂಬಿದರೇನು ?
ಒಳಗೆ ಶುದ್ಧಿಸದೆ, ಘಟವ ಹೊರಗೆ
ತೊಳೆದಂತಲ್ಲವೆ ?
ಅಂತರಂಗ ಪ್ರಕಾಶವಿಲ್ಲದೆ
ಬಹಿರಂಗ ಪ್ರಕಾಶವನೆಷ್ಟು ಪಡೆದರೇನು ?
ಗಂಧವಿಲ್ಲದ ಚಂದನದಂತೆ,
ತೈಲವಿಲ್ಲದ ತಿಲದಂತೆ ನಿರರ್ಥಕ, ಕಾಣಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

## ೧೮೧

ಜಂಗಮನು ಜಗದ್ಭರಿತನೆಂಬುದು ನಿಜ, ನೋಡಾ
ಜಂಗಮನು ಚಿತ್‌ಕಲಾ ಮೂರ್ತಿಯು, ನೋಡಾ !
ಜಂಗಮನು ಷಟ್‌ಸ್ಥಲ ಸ್ವರೂಪನು, ನೋಡಾ !
ಇಂತಪ್ಪ ಜಂಗಮನಿದ್ದ ಸ್ಥಾನವೆ
ಅವಿಮುಕ್ತ ಕ್ಷೇತ್ರ, ನೋಡಾ !
"ಗುರುವಿನ ಗುರು ಜಂಗಮ" ಎಂದುದಾಗಿ
ಶರಣರ ಅನುಭವೋಕ್ತಿಯಿಹುದಯ್ಯಾ,

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

## ೧೮೨

ಜಂಗಮನಾದವನು ಜಗದ ಜಂಜಡವನಳಿದಿರಬೇಕು;
ಜಂಗಮನಾದವನು ಅರಿವಿನರಿವೆಯ ಹೊದ್ದಿರಬೇಕು;
ಜಂಗಮನಾದವನು ಪಂಚಕ್ಲೇಶಗಳಿಂದ ಪಾರಾಗಿರಬೇಕು;
ಪಂಚ ಮುಖನನು ಧ್ಯಾನದೊಳಿರಿಸಿರಬೇಕು,
ಇಂತಪ್ಪ ಜಂಗಮನು ಸಕಲ ಜೀವಾತ್ಮರಿಗೆ
ಲೇಸನೇ ಬಯಸುತಿರ್ದು
ಭಕ್ತರ ಹೃತ್ಕಮಲದಲ್ಲಿರುತಿಹನು, ನೋಡಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

೧೮೩

ಜಂಗಮನ ಶಕ್ತಿಯನರಿಯದೆ
ಜಂಗಮ-ನಿಂದೆಯ ಮಾಡುತಿಹರಯ್ಯಾ, ಕೆಲಬರು !
ಆತ್ಮೋದ್ಧಾರವನೆಳಸುವ ಭಕ್ತರು
ಜಂಗಮ-ತತ್ತ್ವವ ಜರೆದರೆ,
ಫಲವೀವ ತರುವನ್ನು ಕಿತ್ತೆಸೆದಂತೆ, ಕಾಣಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

೧೮೪

ಜಂಗಮನ ಪಾದೋದಕವು
ಮನವ ಮಾಲಿನ್ಯವ ತೊಳೆವುದಯ್ಯಾ !
ಜಂಗಮನ ಪಾದೋದಕವ ಸಿಂಪಡಿಸಲು
ಭಕ್ತನ ಹೃದ್‌ಭೂಮಿಯೊಳು
ತತ್ತ್ವವೆಂಬ ವೃಕ್ಷ ಬೆಳೆವುದಯ್ಯಾ !
ನಿಷ್ಠೆಯಿಂ ಸೇವಿಸಲು, ಇಷ್ಟಾರ್ಥ ಸಿದ್ಧಿಯಪ್ಪುದಯ್ಯಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ!

## ೧೮೫

ಭಯ-ಭಕ್ತಿಯಿಂದೊಡಗೂಡಿ
ಜಂಗಮನ ಪಾದೋದಕವ ಸೇವಿಸಿದ ಫಲವು
ಕೋಟಿ ತೀರ್ಥ ಯಾತ್ರೆಗಿಂತ ಮಿಗಿಲಾದುದಯ್ಯಾ !
ಚರಣದಂಗುಷ್ಠದಲ್ಲೆರೆದ ಗುರು ಪಾದೋದಕವೆ
ಕ್ರಿಯಾ-ಪಾದೋದಕವಾಗಿ,
ಜ್ಞಾನ-ಪಾದೋದಕವಾಗಿ,
ಲಿಂಗ ಮುಖದಿಂ ಭಕ್ತನ ಅಂಗವ ಸೇರಿ,
ಇಷ್ಟ-ಪ್ರಾಣ-ಭಾವ ಲಿಂಗಂಗಳ ಸಂಬಂಧವಾದರೆ,
ಮುಕ್ತಿಯು ಹತ್ತಿರವೆ, ಕಾಣಾ

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

ಶ್ರೀಗುರುವಿಂದ ಪಡೆದ ಪ್ರಸಾದವು
ಶುದ್ಧ ಪ್ರಸಾದವಾಗುವುದಯ್ಯಾ !
ಲಿಂಗ ಮುಖದಿಂದ ಪಡೆದ ಪ್ರಸಾದವು
ಸಿದ್ಧ ಪ್ರಸಾದವಾಗುವುದಯ್ಯಾ !
ಜಂಗಮನಿಂದ ಪಡೆದ ಪ್ರಸಾದವು
ಪ್ರಸಿದ್ಧ ಪ್ರಸಾದವಾಗುವುದಯ್ಯಾ !
ಈ ಕ್ರಮವರಿತು ಪ್ರಸಾದವ ಸೇವಿಸಿದೊಡೆ
ತನು–ಮನ-ಭಾವಂಗಳು
ಪರಿಶುದ್ಧಿಗೊಂಡು ಪ್ರಸಾದಮಯವಾಗುವವು ಕಾಣಾ,

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

# ೧೪೭

ಗುರು ಮುಟ್ಟಿ ನೀಡಿದ ಪ್ರಸಾದವನು
ಲಿಂಗ ತ್ರಯಕೆ ಸಮರ್ಪಿಸಿದರೆ
ತನು–ತ್ರಯ ಪರಿಶುದ್ಧವಾಗಿ
ಮಲ ತ್ರಯ–ಪರೆ ದೂರವಾಗಿ
ಚಿತ್ ಸಾಗರದೊಳು ಚಿದ್‌ರಸ ಕೂಡಿದಂತೆ
ಸಮರಸ ಹೊಂದಿದ ಪ್ರಸಾದಿಯು
ಚಿತ್ ಸುಖಿಯಾಗುವನಯ್ಯಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

೧೮೮

ಭಸ್ಮ ಧಾರಣದಿಂದ ಗುಣತ್ರಯಂಗಳ ಪರಿಹಾರವಯ್ಯಾ!
ಭಸ್ಮ ಧಾರಣದಿಂದ ಮಲತ್ರಯಂಗಳ ಸಂಹಾರವಯ್ಯಾ!
ಭಸ್ಮ ಧಾರಣದಿಂದ ಈಷಣತ್ರಯಂಗಳ
ನಿವಾರಣೆಯಯ್ಯಾ !
ಭಸ್ಮ ಧಾರಣದಿಂದ ತ್ರಿವಿಧ ಕರ್ಮಂಗಳ
ವಿಮೋಚನೆಯಯ್ಯಾ !
ಭಸ್ಮ ಧಾರಣದಿಂದ ಪಾಪ ಪಲ್ಲಟವಾಗಿ,
ಸರ್ವಾಂಗ ಶುದ್ಧವಾಗಿ
ನಿನ್ನನೊಲಿಸಲು ಸುಲಭವಾಗುವುದಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ!

## ೧೮೪

ಗೋಮಯದಿಂದ ಮಾಡಿದ ಭಸ್ಮವ
ಲಲಾಟದಲಿ ಧರಿಸಿದೊಡೆ,
ವಿಧಿಲಿಖಿತದ ದುರಕ್ಷರುಗಳು
ದೂರಾಗುವವಯ್ಯಾ !
ಪಾದೋದಕದಿಂದ ಶುದ್ಧಗೊಳಿಸಿದ ಭಸ್ಮವ
ಮೂವತ್ತೆರಡು ಸ್ಥಾನಂಗಳಲಿ
ಮಹಾ ಮಂತ್ರವ ಪಠಿಸುತ್ತ ಧರಿಸಿದೊಡೆ
ಆಧಿ–ವ್ಯಾಧಿಗಳು ನಶಿಸಿ
ಶಿವ ಸೌಂದರ್ಯದ ಕಳೆ ಬೆಳಗುವುದಯ್ಯಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

## ೧೯೦

ಭಸ್ಮವಿಲ್ಲದ ಹಣೆಯು
ಎಲೆಗಳಿಲ್ಲದ ತರುವಿನಂತೆ ನೋಡಯ್ಯಾ !
ಗೋಮಯದ್ದಲ್ಲದ ಭಸ್ಮ
ಹಾಲು ಕರೆಯದ ಗೋವಿನಂತೆ, ನೋಡಯ್ಯಾ
ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !
"ಶಿವನ ಪ್ಯೈ ಬೆಳಗು" ಭಸ್ಮ ಕಾಣಾ !

ರುದ್ರನ ಜ್ಞಾನ ನೇತ್ರದಿಂದುದಯಿಸಿದ ರುದ್ರಾಕ್ಷವನು
ಶಿರದೊಳು ಧರಿಸಿದೊಡೆ,
ಉರಗಭೂಷಣ ತಾನಾಗುವನಯ್ಯಾ !
ಕೋಟಿ ಯಜ್ಞವ ಗೈದ ಫಲವು
ರುದ್ರಾಕ್ಷ ಧಾರಣದಿಂದ ದೊರೆಕೊಂಬುದಯ್ಯಾ !
ದೀರ್ಘ ಕಾಲ ತಪಗೈದ ಫಲವು
ರುದ್ರಾಕ್ಷ ಧಾರಣದಿಂದ ಪ್ರಾಪ್ತವಾಗುವುದಯ್ಯಾ !
"ರುದ್ರಾಕ್ಷ ಮಾಲೆಯು ಕೊರಳಲಿ ನಿರಂತರ ಕಂಗೊಳಿಸಿದರೆ
ಕೈಲಾಸದೊಳು ಕುಳಿತಂತೆಂ"ದು
ಆಗಮಂಗಳು ಸಾರುತಿಹವು, ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

# ೧೯೨

ರುದ್ರಾಕ್ಷ ಸ್ಪರ್ಶದಿಂದ
ಪಾಪ ಪಲ್ಲಟಗೊಳ್ಳುವುದಯ್ಯಾ !
ರುದ್ರಾಕ್ಷ ಧಾರಣದಿಂದ
ರೋಗ-ರುಜಿನಂಗಳು ಬಿಟ್ಟೋಡುವವಯ್ಯಾ !
ರುದ್ರಾಕ್ಷ ಪೂಜೆಯಿಂದ
ಕರ್ಮಂಗಳು ಕಾಲ್ದೆಗೆಯುವವಯ್ಯಾ !
ಇಂತಾದ ಬಳಿಕ ರುದ್ರಾಕ್ಷಧಾರಕರು
ಪೂತಾತ್ಮರಾಗಿ ಪೂಜೆಗೊಳ್ಳುವರಯ್ಯಾ

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

## ೧೯೩

ರುದ್ರಾಕ್ಷ ಮಾಲೆಯು ಧರಿಸಿದೊಡೆ
ಭವ ಮಾಲೆ ಪರಿವುದು, ನೋಡಾ !
ರುದ್ರಾಕ್ಷ ಮಾಲೆಯು ಚಿದಂಗದಾಭರಣವಾಗಿಹುದು,
ನೋಡಾ !
ರುದ್ರಾಕ್ಷ ಮಾಲೆಯಿಂದ ಜಪಿಸಿದ ಸದ್‌ಭಕ್ತರು
ನಿತ್ಯ ತೃಪ್ತರಾಗಿರ್ಪರು, ನೋಡಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

೧೯೪

ಭಕ್ತನಿಗೆ ಪಂಚಾಕ್ಷರ ಮಂತ್ರವೆ
ಪಂಚ ಪ್ರಾಣವಾಗಿಹುದು, ನೋಡಾ !
ಪಂಚಾಕ್ಷರ ಮಂತ್ರ-ಧ್ಯಾನವೆ
ಸಂಚಿತ ಕರ್ಮಂಗಳ ಸದೆಬಡೆವುದು, ನೋಡಾ
ಪಂಚಾಕ್ಷರ ಮಂತ್ರವ ಜಪಿಸಿದವನು
ಸಾಕ್ಷಾತ್ ಪರಶಿವನೆ ತಾನಾಗುವನು ನೋಡಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ!!

## ೧೯೫

ಪಂಚಾಕ್ಷರಕ್ಕೆ ಮೊದಲು ಪ್ರಣವ ಕೂಡಿದರೆ
ಷಡಕ್ಷರ ಮಂತ್ರವಾಗುವುದಯ್ಯಾ !
ಇಂತಪ್ಪ ಷಡಕ್ಷರ ಮಂತ್ರವ ಜಪಿಸಿದರೆ
ಷಡ್‌ವೈರಿಗಳು ಪಲಾಯನಗೊಂಡು
ಪರಮಾತ್ಮನ ಸಾನ್ನಿಧ್ಯ ಸಾಧ್ಯವಾಗುವುದಯ್ಯಾ !

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೧೯೭

ಜಪಂಗಳಲಿ
ಮಾನಸಿಕ ಜಪವೆ ಮಿಗಿಲು, ನೋಡಯ್ಯಾ !
ತಪಂಗಳಲಿ
ಸತ್ಯಾಚರಣೆಯು ತಪವೆ ಮಿಗಿಲು, ನೋಡಯ್ಯಾ !
ಮಂತ್ರಂಗಳಲಿ
ಷಡಕ್ಷರ ಮಹಾ ಮಂತ್ರವೆ ಮಿಗಿಲು, ನೋಡಯ್ಯಾ !

ಭ್ಯೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೧೯೭

ಭಕ್ತಿಯೆಂಬ ಪತ್ರಿಯ ಧರಿಸಿ
ಹರುಷವೆಂಬ ಧೂಪವ ಸಲಿಸಿ
ಲಿಂಗವನರ್ಚಿಸಿ
ನಿಷ್ಠೆಯ ಬಲಿಸಿ, ಸದಾನಂದವ ಪಡೆಯಬೇಕಯ್ಯಾ !
ಲಿಂಗಕೆ ರುಚಿಯನರ್ಪಿಸಿ
ಅಂಗದವಗುಣವಳಿಸಿ, ಚಿದಾನಂದವ ಪಡೆಯಬೇಕಯ್ಯಾ!
ಭಾವವೆಂಬ ಹಾಲಿಗೆ ಸುಜ್ಞಾನವೆಂಬ ಸಕ್ಕರೆ ಬೆರೆಸಿ,
ಅನುಭವಾಮೃತ ಸವಿದು, ಸಂಪೂರ್ಣಾನಂದವ
ಪಡೆಯಬೇಕಯ್ಯಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ!!

## ೧೯೮

ಅಷ್ಟ ಮದಂಗಳ ಕೊರೆದು,
ಅಷ್ಟ ಭೋಗಂಗಳ ತೊರೆದು,
ಅಷ್ಟ ಸಿದ್ಧಿಗಳ ಮರೆದು,
ಅಷ್ಟ ಐಸಿರಿಗಳ ಜರೆದು,
ಅಷ್ಟಾವರಣಂಗಳ ಹೊಂದಿ
ಪೂಜಿಸುವುದೆ, ಅಷ್ಟವಿಧಾರ್ಚನೆ, ನೋಡಾ,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ!

## ೧೯೯

ಭಕ್ತನಾದೊಡೆ ಭಯ–ಭಕ್ತಿ ತುಂಬಿರಬೇಕು ;
ಭಕ್ತನಾದೊಡೆ ನಡೆ–ನುಡಿ ಶುದ್ಧವಾಗಿರಬೇಕು ;
ಭಕ್ತನಾದೊಡೆ ತ್ರಿವಿಧ ಭಕ್ತಿಯನರಿತಿರಬೇಕು ;
ಭಕ್ತನಾದೊಡೆ ಸದಾಚಾರ ಸಂಪನ್ನನಾಗಿರಬೇಕು;
ಭಕ್ತನಾದೊಡೆ ಸದ್‌ವಿಚಾರ ಪರಿಪೂರ್ಣನಾಗಿರಬೇಕು;
ಭಕ್ತನಾದೊಡೆ ಗುರು-ಲಿಂಗ-ಜಂಗಮ
ಪ್ರೇಮಿಯಾಗಿರಬೇಕು,
ಇಂತಪ್ಪ ಭಕ್ತನೆ ಸದ್‌ಭಕ್ತನು, ನೋಡಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ!!

## ೨೦೦

ಭಕ್ತಿಯಿಲ್ಲದ ಭಕ್ತನು
ಮಧುವಿಲ್ಲದ ಜೇಂಗೊಡದಂತೆ, ಕಾಣಯ್ಯಾ !
ಶಕ್ತಿಯಿಲ್ಲದ ಭಕ್ತನು
ಗೊಬ್ಬರವಿಲ್ಲದ ಹೊಲ ಗದ್ದೆಯಂತೆ, ಕಾಣಯ್ಯಾ !
ಮುಕ್ತಿಯು ಪಥ ಹಿಡಿಯದ ಭಕ್ತನು
ಬೆಳಕಿಲ್ಲದ ಮನೆಯಂತೆ, ಕಾಣಯ್ಯಾ !

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ!

## ೨೦೧

ಭವಿಯು ಭಕ್ತನಾಗುವ ಬಗೆಯೆಂತೆಂದೊಡೆ :
ಕಾಮ–ಕ್ರೋಧಂಗಳ ಗೆದ್ದಿರಬೇಕು ;
ಮದ-ಮಾತ್ಸರ್ಯಂಗಳ ಮುರಿದಿಕ್ಕಬೇಕು ;
ರಾಗ-ದ್ವೇಷಂಗಳ ವರ್ಜಿಸಬೇಕು ನೋಡಾ !
ಅಷ್ಟ ಮದಂಗಳ ಮೆಟ್ಟಿರಬೇಕು ;
ಮಾಯಾದಿ ಮಲಂಗಳ ಬಿಟ್ಟಿರಬೇಕು ;
ಅಹಂಕಾರಾದಿ ದುರ್ಗುಣಂಗಳ ಸುಟ್ಟಿರಬೇಕು, ನೋಡಾ
ಸದಾಚಾರ ಸದ್ವರ್ತನೆಯೇ
ಭಕ್ತನ ಜೀವನದ ಜೀವಾಳವಾಗಿರಬೇಕು !
ಇಂತಪ್ಪ ಭಕ್ತನಿಗೆ ಭವಬಂಧನವೆಲ್ಲಿಯದಯ್ಯಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ?

# ೨೦೨

ಹೃದಯ-ಶುದ್ಧಿಯಿಲ್ಲದ ಭಕ್ತನವನೆಂತಹ ಭಕ್ತನಯ್ಯಾ?
ಭಾವ-ಶುದ್ಧಿಯಿಲ್ಲದ ಭಕ್ತನವನೆಂತಹ ಭಕ್ತನಯ್ಯಾ ?
ಕುಹಕ-ಕುಭಾಷೆ ತೊರೆಯದ ಭಕ್ತನವನೆಂತಹ
ಭಕ್ತನಯ್ಯಾ ?
ಭೌತಿಕ ಸೌಖ್ಯವ ಮರೆಯದ ಭಕ್ತನವನೆಂತಹ
ಭಕ್ತನಯ್ಯಾ ?
ಭವರೋಗಕ್ಕೀಡಾಗಿ ಬಳಲುವ ಭಕ್ತನವನೆಂತಹ
ಭಕ್ತನಯ್ಯಾ ?
ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರನ
ಕೃಪೆಯಿಲ್ಲದ ತೊಳಲುವ ಭಕ್ತನವನೆಂತಹ ಭಕ್ತನಯ್ಯಾ?

೨೦೩

ಭಕ್ತನಾದವನು ಗುರು-ಲಿಂಗ-ಜಂಗಮರಲ್ಲಿ
ಭೇದವನೆಣಿಸಬಾರದು, ನೋಡಾ !
ಭಕ್ತಿಯಲಿ ಹಿರಿ-ಕಿರಿಯದೆಂದು ಭೇದಿಸಿ
ಯುಕ್ತಿಯು ತೋರಬಾರದು, ನೋಡಾ !
ಭಕ್ತನಾದವಗೆ ಭಕ್ತಿಯೊಂದೆ ಜೀವಾಳವಯ್ಯಾ,

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

## ೨೦೪

ಭಕ್ತಿಯುಳ್ಳ ಭಕ್ತನ ನಿವಾಸವೆ ಕೈಲಾಸವಯ್ಯಾ !
ಭಕ್ತಿಯುಳ್ಳ ಭಕ್ತನ ಶಿರವೆ ಹೊಂಗಳಸವಯ್ಯಾ !
ಭಕ್ತಿಯುಳ್ಳ ಭಕ್ತನ ಭಾವದಲ್ಲಿ ಕುಳಿತು,

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರನು

ನಲಿದಾಡುತಿಹನಯ್ಯಾ !

೨೦೫

ಭಕ್ತರೆಮಗೆ ಪ್ರಾಣ-ಸ್ವರೂಪರು, ನೋಡಾ !
ಭಕ್ತರೆಮಗೆ, ಆತ್ಮ-ಬಂಧುಗಳು, ನೋಡಾ !
ಭಕ್ತರೆ ಸಮಾಜಾಭಿವೃದ್ಧಿಗೆ, ಆಧಾರ-ಸ್ತಂಭರು, ನೋಡಾ!
ಗುರು-ಶಿಷ್ಯರ ಸು-ರುಚಿರ ಬಾಂಧವ್ಯವೆ
ಮಧು-ರಸದಂತೆ ಸುಮಧುರವಾಗಿಪ್ಪುದು, ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ!

೨೦೬

ಮೋಹವಳಿದಾತನೆ ಮಾಹೇಶ್ವರನು, ನೋಡಾ !
ತನು-ಮನ-ದಾಹವ ಕಳೆದಾತನೆ ಮಾಹೇಶ್ವರನು,
ನೋಡಾ !
ಸದ್ವಿಚಾರವನು ಸದಾಚಾರದಲ್ಲಿಳಿಸಿದಾತನೆ,
ಮಾಹೇಶ್ವರನು, ನೋಡಾ !
ಶಿವ ಸೌಂದರ್ಯವನು ಸತ್ಯವನ್ನಾಗಿಸಿದಾತನೆ,
ಮಾಹೇಶ್ವರನು ನೋಡಾ
ಸೋಹಮೆಂಬುದನರಿದು ಮಹಾ ಬೆಳಗ ಕಂಡಾತನೆ,
ಮಾಹೇಶ್ವರನು, ನೋಡಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

## ೧೦೭

ಮಾಹೇಶ್ವರನಾದವನು
ಪರನಾರೀ ಸಹೋದರನಾಗಿರಬೇಕು !
ಮಾಹೇಶ್ವರನಾದವನು
ಪರದ್ರವ್ಯವನಪಹರಿಸದಿರಬೇಕು;
ಮಾಹೇಶ್ವರನಾದವನು
ಲಿಂಗ ನಿಷ್ಠೆಯನು ಬಲಿಸಿಕೊಂಡಿರಬೇಕು;
ನಡೆ ನುಡಿಯಲ್ಲಿ ಪರಿಶುದ್ಧನಾಗಿರದೆ,
ಮನಬಂದಂತೆ ತಿರುಗುವಾತನು
ಮಾಹೇಶ್ವರನಲ್ಲ ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೨೦೮

ಹಿಡಿದಿರ್ದ ವ್ರತಂಗಳ ಬಿಡದಾತನೆ
ಮಾಹೇಶ್ವರನು, ನೋಡಾ !
ಕೆಡುತಿರ್ಪ ದೇಹವನು ನೆಚ್ಚದಾತನೆ
ಮಾಹೇಶ್ವರನು ನೋಡಾ !
ಸಕಲ ಪ್ರಾಣಿಗಳಲಿ ದಯೆ ತೋರಿ
ಶಿವ ಸುಖದಲ್ಲಿ ಮನವಿಟ್ಟಾತನೆ
ವೀರ ಮಾಹೇಶ್ವರನು, ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

## ೨೦೯

ಸಂಸಾರ-ಸಾಗರದೊಳು ತಾನಪ್ಪಳಿಸಿ ಬರುತಿಹ
ವಿಷಯಂಗಳೆಂಬ ತರಂಗಗಳ ಹೊಡೆತಕ್ಕೆ
ಸಿಲುಕದಿಪ್ಪಾತನೆ ಮಾಹೇಶ್ವರನಯ್ಯಾ !
ಮಾಯೆಯೆಂಬ ಬಲೆಯೊಳಗೆ ಬೀಳದಿರುವಾತನೆ
ಮಾಹೇಶ್ವರನಯ್ಯಾ ।
ಪಂಚ ಕ್ಲೇಶಂಗಳೆಂಬ ಪಂಜರದೊಳಗೆ
ಕೊಂಚವೂ ಹೋಗದಾತನೆ ಮಾಹೇಶ್ವರನಯ್ಯಾ
ಅಹಂಕಾರ-ಮಮಕಾರಂಗಳನಳಿದು
ಮದ-ಮಾತ್ಸರ್ಯಂಗಳಂ ತುಳಿದು
ಹೃದಯ ದ್ವಾರವಂ ತೆರೆದು
ಪ್ರಪಂಚಕ್ಕೆ ಸತ್ಯ ಸಂದೇಶವ ಬೀರಿ
ಜಡ-ಭಾವಂಗಳಂ ಹಾರಿಸಿ
ಮೃಡನಡಿಯ ತೋರಿಸಿ
ಚಿದ್‌ರಸಾನಂದದನುಭವವ ನೀಡುವ ವೀರ ಮಾಹೇಶ್ವರನ
ಮಹಾಗುಣವು ಸತ್ಯ ಸತ್ತ್ವವಾದುದು, ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

೨೧೧

ಗುರುವಿಗರ್ಪಿಸದಿಹ ಪದಾರ್ಥವು
ಪ್ರಸಾದವೆಂತಾಗುವುದಯ್ಯಾ ?
ಲಿಂಗಕ್ಕರ್ಪಿಸದಿಹ ಪದಾರ್ಥವು
ಪ್ರಸಾದವೆಂತಾಗುವುದಯ್ಯಾ !
ಜಂಗಮಕ್ಕರ್ಪಿಸದಿಹ ಪದಾರ್ಥವು
ಪ್ರಸಾದವೆಂತಾಗುವುದಯ್ಯಾ ?
ತ್ರಿವಿಧ ಭಕ್ತಿಯೊಡನೆ ಗುರು-ಲಿಂಗ-ಜಂಗಮಕ್ಕೆ
ಪ್ರಸಾದವ ಸಮರ್ಪಿಸಿಕೊಂಡಾತನೆ
ಪ್ರಸಾದಿ, ನೋಡಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

ಬಟ್ಟಲ ಬೆಳಗದೆ
ಒಳಗೆ ತಾ ತೊಳೆಯದೆ
ಎಡೆ-ಬಟ್ಟಲದೊಳಗೆ ಎಡೆಯ ನೀಡಿದೊಡೆ,
ಶುದ್ಧವಾಗುವದೆಂತಯ್ಯಾ ?
ಹೃದಯದ ಬಟ್ಟಲವನು
ಸುಬುದ್ಧಿಯುದಕದಿಂದ
ತೊಳೆದು ಬೆಳಗಿಸಿ
ಲಿಂಗಕ್ಕರ್ಪಿಸಿ ಪದಾರ್ಥವ ಸೇವಿಸಿದೊಡೆ,
ಶುದ್ಧ ಪ್ರಸಾದವಾಗುವದಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೨೧೨

ಶುದ್ಧ–ಸಿದ್ಧ–ಪ್ರಸಿದ್ಧ ಪ್ರಸಾದಂಗಳ ಪರಿಯ ಕೇಳಿರೋ!
ಶುದ್ಧ ಪ್ರಸಾದಿಯಾದೊಡೆ
ಇಷ್ಟಲಿಂಗಕ್ಕೆ ರೂಪವನರ್ಪಿಸಬೇಕು ;
ಸಿದ್ಧ ಪ್ರಸಾದಿಯಾದೊಡೆ
ಪ್ರಾಣಲಿಂಗಕ್ಕೆ ರುಚಿಯನರ್ಪಿಸಬೇಕು ;
ಪ್ರಸಿದ್ಧ ಪ್ರಸಾದಿಯಾದೊಡೆ
ಭಾವಲಿಂಗಕ್ಕೆ ತೃಪ್ತಿಯನರ್ಪಿಸಬೇಕು,
ಇಂತೀ ತ್ರಿವಿಧ ಪ್ರಸಾದವನು
ತ್ರಿವಿಧ ಲಿಂಗಕ್ಕೆ ಸಮರ್ಪಿಸಿದ
ಶಿವಶರಣರು ನಿತ್ಯ ಮುಕ್ತರಾದರು, ನೋಡಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

## ೨೧೩

ತುತ್ತಿಗೊಮ್ಮೆ ಶಿವ-ಧ್ಯಾನಗೈಯುತ್ತ
ಸೇವಿಸಿದ ಪ್ರಸಾದವು ಶಿವ ಪ್ರಸಾದವಾಗುವುದಲ್ಲದೆ,
ಮತ್ತೆ ಅನ್ನವೆಂದು ಬಗೆಯಬಹುದೇ ?
ಅಕ್ಕಿ ಸಂಸ್ಕಾರದಿಂದನ್ನವಾದ ಮೇಲೆ
ಮತ್ತೆ ಅದು ಅಕ್ಕಿಯಾಗಬಲ್ಲುದೆ ?
ನೀಡಿದ ಸಕಲ ಪದಾರ್ಥಂಗಳು
ಜಂಗಮನ ಹಸ್ತ-ಸ್ಪರ್ಶದಿಂದ
ಪರಿಶುದ್ಧವಾದ ಮೇಲೆ
ಮತ್ತೆ, ಆ ಪದಾರ್ಥವ ಶುದ್ಧವಪ್ಪುದೆ,
ಹೇಳಯ್ಯಾ

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !!

## ೨೧೪

ಪ್ರಸಾದದ ಮಹಿಮೆಯನರಿಯದೆ
ಕೈ ಬಾಯಿ ತೊಳೆಯದೆ
ಕಂಡ ಕಂಡಂತೆ ಉಂಡು, ತಿರುಗುತಿಪ್ಪವರ ಕಂಡು
ಮನ ನೊಂದಿತ್ತಯ್ಯಾ !
ಜಗಕ್ಕಾಧಾರವಾಗಿರ್ಪ ಪ್ರಸಾದದನ್ನವನು
ಸಿಕ್ಕ-ಸಿಕ್ಕಲ್ಲಿ ಚಲ್ಲಿ
ಕರ್ಮದ ಕತ್ತಲೆಯಲ್ಲಿ ಬೀಳುತಿಪ್ಪವರ ಕಂಡು
ಮನ ಬೆಂದಿತ್ತಯ್ಯಾ !
ಪ್ರಸಾದಕ್ಕೆ ವಿಶ್ವಾಸವ ತೋರದೊಡೆ
ಮೂಜಗದೊಡೆಯನು ಮಳೆ ಬೆಳೆಯನೆಂತು
ನೀಡುವನಯ್ಯಾ ?
ಪ್ರಸಾದದಿಂದ ಅರಿವು ;
ಪ್ರಸಾದದಿಂದ ಕ್ರಿಯಾ-ಶುದ್ಧಿ ;
ಪ್ರಸಾದದಿಂದ ತ್ರಿಕರಣ ಶುದ್ಧಿಯಾಗಿ
ಜನನ ಮರಣಂಗಳು ದೂರಾಗುತಿಹವಯ್ಯಾ,

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ !

## ೨೧೫

ಆರೋಗ್ಯ ಸಂವರ್ಧನೆಗೆ ಪ್ರಸಾದವೆ ಮೂಲವಯ್ಯಾ!
ಕಾಯಕ ವೃದ್ಧಿಗೆ ಪ್ರಸಾದವೆ ಮೂಲವಯ್ಯಾ !
ಮಾಯಾ-ಮರ್ದನಕೆ ಪ್ರಸಾದವೆ ಮೂಲವಯ್ಯಾ !
ತನು ತ್ರಯ ತಾಪತ್ರಯಂಗಳ ಕಳೆದು,
ತನ್ನ ತಾನರಿದುಕೊಳ್ಳಲು
ಪ್ರಸಾದವೆ ಮೂಲವಯ್ಯಾ,

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ ! !

೨೧೬

ಜಂಗಮನಿಂದನುಗ್ರಹವ ಪಡೆದು
ತೊಡೆಯ ಮೇಲೆ ತಟ್ಟೆಯನಿಟ್ಟು
ಪ್ರಸಾದವ ಸೇವಿಸಿದರೆ, ಪ್ರಸಾದಿಯಾಗುವನೇನಯ್ಯಾ?
ಇದು ಹೊರಗಣ ನೋಟವಲ್ಲದೆ, ಮತ್ತೇನುಂಟಯ್ಯಾ?
ಪ್ರಸಾದಿಯಾದೊಡೆ ಹೃದಯದ ತಟ್ಟೆಯಲಿಹ
ಕಲ್ಮಷವ ತೊಳೆದು
ತ್ರಿಮಲವ ತಿಕ್ಕಿ-ತಿಕ್ಕಿ ಒರಸುತ್ತ ಹೋದಂತೆ
ಆತ್ಮ ಶುದ್ಧಿಯಾಗಿ ಬೆಳಗು ಕಂಡು
ಅಚ್ಚ ಪ್ರಸಾದಿಯಾಗಿ ಮೆರೆಯುವನಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ!

ಪ್ರಾಣಲಿಂಗಿಯಾದೊಡೆ
ಪ್ರಾಣವೆ ಲಿಂಗವಾಗಿರಬೇಕು
ಲಿಂಗವೆ ಪ್ರಾಣವಾಗಿರಬೇಕು,
ಸತ್‌ಚಿತ್ ಆನಂದದ ಪರಿಜ್ಞಾನ
ಪರಿಪೂರ್ಣವುಳ್ಳಾತನೆ
ಪ್ರಾಣಲಿಂಗಿ ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೨೧೮

ಜೀವಭಾವವಳಿಯದೆ
ಅಂಗವೆಂತಾಗುವದೋ ?
ನಿತ್ಯ ಅರ್ಚನೆಗೊಳ್ಳದೆ
ಲಿಂಗವೆಂತಾಗುವದೋ ?
ಪ್ರಾಣಸ್ವರೂಪವೆನಿಸಿಕೊಳ್ಳದೆ
ಪ್ರಾಣಲಿಂಗವೆಂತಾಗುವದೋ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ!

## ೨೧೯

ಪ್ರಾಣಲಿಂಗದ ಘನವನರಿತವರು
ಸ್ಥಾವರಲಿಂಗಗಳಿಗೆ ಮನವೆಳಸದಂತಿರಬೇಕು ;
ಜ್ಞಾನಾಚಾರದಲ್ಲಿ ನಿರತರಾಗಿರಬೇಕು ;
ಪ್ರಪಂಚ ಭ್ರಾಂತಿಯ ತೊರೆದಿರಬೇಕು;
ಅರುಹಿನ ರೂಹು ಅರಿದಿರಬೇಕು ;
ನಿತ್ಯ ಲಿಂಗದಲ್ಲಿ ಚಿತ್ತವಡಗಿರಬೇಕು;
ಎರಡಳಿದು ಒಂದಾಗಿ ಸಾಮರಸ್ಯ ಪಡೆದಾತನೆ
ನಿಜ ಪ್ರಾಣಲಿಂಗಿ ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೨೨೦

ಒಳ ಹೊರಗೆಂಬ ಸಂಶಯುವನಳಿಯುದೆ
ಅಹಂಕಾರ ತ್ರಯುಂಗಳನು ಕಳೆಯುದೆ
ದೇಹ ದೇಗುಲದೊಳಗೆ
ಭಾವಸಿಂಹಾಸನ ಮಾಡದೆ
ಪ್ರಾಣಲಿಂಗಾರ್ಚನಸ್ಥಲವನರಿಯುದೆ
ಪೂಜಿಸುತ್ತಿರುವವರೆಂತು
ಪ್ರಾಣಲಿಂಗಿಗಳಾಗುವರಯ್ಯಾ ?

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೨೨೧

ಕರಣೇಂದ್ರಿಯಂಗಳ ಗುಣ ಕಳೆದು
ಅಷ್ಟಮದಂಗಳನು ತುಳಿದು
ಸಪ್ತವ್ಯಸನಂಗಳನು ಅರೆದು
ಮರವೆಯೆಂಬ ಮಾಯೆಯನು ಮುರಿದು
ಬೇಕು ಬೇಡೆಂಬುದನಳಿದು
ಲೋಕದ ಹಂಗು ಹರಿದು
ಭವಬಾಧೆಯನತಿಗಳೆದು
ನಡೆ ನುಡಿಯೊಂದಾಗಿರುವ ಶರಣನು

ನಮ್ಮ ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರನಲ್ಲಿ
ನಿಜ ಶರಣನು ನೋಡಾ.

## ೨೨೨

ಕಾಮಶರನ ಹೊಡೆತಕ್ಕೆ ಸಿಗುವಾತನಲ್ಲ ಶರಣನು,
ಹಿಡಿದ ನಿಯಮವ ಬಿಡುವಾತನಲ್ಲ ಶರಣನು,
ನಿಂದಕರ ನುಡಿಗೆ ಕುಂದುವವನಲ್ಲ ಶರಣನು,
ಸ್ತುತಿಯನ್ನಾಲಿಸಿ ಹಿಗ್ಗುವವನಲ್ಲ ಶರಣನು,
ಸಂದೇಹ ಸಂದೋಹದಲ್ಲಿರುವವನಲ್ಲ ಶರಣನು,
ಶರಣಸತಿ ಲಿಂಗಪತಿಯೆಂದು
ಪೂಜಿಸುವ ಶರಣನಿಗೆ
ಭವಭಯವುಂಟೇನಯ್ಯಾ ?

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಹಣೆಯಲ್ಲಿ ವಿಭೂತಿ
ಕರದಲ್ಲಿ ಜಪಮಾಲೆ
ಮನದಲ್ಲಿ ಭವಮಾಲೆ ಧರಿಸಿಕೊಂಡು
ತಿರುಗುತ್ತಿರುವವರಿಗೆ ಶರಣರೆಂದೆನ್ನಬಹುದೆ ?
ಅಲ್ಲಲ್ಲ—
ಕಾಮನ ಭಸ್ಮವಮಾಡಿ
ಷಡಕ್ಷರ ಮಂತ್ರವ ಜಪಿಸಿ
ಷಡ್ವಿಧ ಲಿಂಗವನರ್ಚಿಸಿ
ಭವಮಾಲೆಯ ಹರಿದು
ಭವಹರನ ಸಮರಸವನರಿದವರೆ
ನಿಚ್ಚ ಶರಣರು ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

## ೨೨೪

ಶರಣನು ನುಡಿದು ತಪ್ಪುವನಲ್ಲ
ಶರಣನು ನಡೆದು ತಪ್ಪುವನಲ್ಲ
ಶರಣನಾರ ಹಂಗಿನಲ್ಲಿರುವವನಲ್ಲ
ಶರಣನು ನಡೆ ನುಡಿಯಲ್ಲಿ ಪರಿಶುದ್ಧನಿದ್ದು
ಜಗದಾಟವ ಮರೆದು
ಬಹಿರಂಗದಾಡಂಬರಕ್ಕಾಶೆ ಮಾಡದೆ
ನಿಜ ಸುಖದಲ್ಲಿದ್ದು
ಆರೂಕಾಣದ ಘನವ ನೋಡುವನಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಶರಣರಿದ್ದ ವಾಸವೆ ಕೈಲಾಸವಯ್ಯಾ
ಶರಣರಿದ್ದ ಕ್ಷೇತ್ರವೆ ಅವಿಮುಕ್ತ ಕ್ಷೇತ್ರವಯ್ಯಾ ;
ಶರಣರಿರ್ದಲ್ಲಿಯೆ ಸಕಲ ತೀರ್ಥಂಗಳಯ್ಯಾ ;
ಶರಣರ ದಾರಿಯೆ ಸನ್ಮಾರ್ಗಕಾಧಾರ ನೋಡಯ್ಯಾ ;
ಶರಣರ ಸಹವಾಸವೆ ಭವಪಾಶನಾಶವಯ್ಯಾ ;
ಶರಣರ ನೋಟವೆ ಜನುಮ ಪಾವನವಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ

ಚಿನ್ನದಂತೆ ಪರಿಶುದ್ಧರಿರುವ
ಶರಣರ ಸಂಗವು
ಪರುಷಮುಟ್ಟಿದ ಲೋಹದಂತೆ ಕಾಣಯ್ಯಾ.

## ೨೨೬

ಭಾವೈಕ್ಯವೆಂದೊಡೆ
ನಿರ್ಮಲ ಜಲದಂತೆ ಪ್ರವಹಿಸುತ್ತಿರಬೇಕು ;
ಭಾವೈಕ್ಯವೆಂದೊಡೆ
ಸಾಗರದಂತೆ ಪ್ರಶಾಂತವಾಗಿರಬೇಕು ;
ಭಾವೈಕ್ಯವೆಂದೊಡೆ
ನೀರು ನೀರನು ಬೆರತಂತಿರಬೇಕು ;
ಭಾವೈಕ್ಯವೆಂದೊಡೆ
ಹೂವಿನಲಿ ಮಕರಂದ ಮರೆಯಾದಂತಿರಬೇಕು ;
ಭಾವೈಕ್ಯವೆಂದೊಡೆ
ಕ್ಷೀರದಲಿ ಕ್ಷೀರ ಒಂದಾದಂತಿರಬೇಕು ;

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

# ೨೨೭

ತಾನೇ ತಾನಾದವಂಗೆ
ಸುಖದುಃಖಗಳ ಲೇಪವೆಲ್ಲಿಯದೋ ?
ಹಿರಿಕಿರಿದು ಭೇದಂಗಳ ಪರಿಯೆಲ್ಲಿಯದೋ ?
ಅಹಂಕಾರ ಮಮಕಾರಂಗಳ ಮೋಹವೆಲ್ಲಿಯದೋ ?
ಅಂಗ ಗುಣಂಗಳನಳಿದು
ಲಿಂಗಭಾವವ ತಳೆದು
ನಿಃಕಳಂಕ ನಿರಂಜನನಾದ ಲಿಂಗೈಕ್ಯಂಗೆ
ಜನನ ಮರಣಂಗಳ ಬಾಧೆಯಲ್ಲಿಯದೋ ?

ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

೨೨೮

ಲಿಂಗೈಕ್ಯನು ನಿತ್ಯಮುಕ್ತನು ನೋಡಾ,
ಲಿಂಗೈಕ್ಯನು ಕರ್ಮವಿರಹಿತನು ನೋಡಾ,
ಲಿಂಗೈಕ್ಯನು ನಿರ್ವಿಕಾರನು ನೋಡಾ,
ಲಿಂಗೈಕ್ಯನು ಪರಿಪೂರ್ಣನು ನೋಡಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ,
ನಿಜಲಿಂಗೈಕ್ಯ ನಿರವನರಿಯುವದು
ಭವಭಾರಕರಿಗೆಂತು ಸಾಧ್ಯವಯ್ಯಾ ?

## ೨೨೯

ಲಿಂಗಾಂಗ ಸಾಮರಸ್ಯವು
ಸುಮ್ಮನೆ ಕುಳಿತು ಲಿಂಗವ ಪೂಜಿಸಿದೊಡೆ
ಬರುವುದೇನಯ್ಯಾ ?
ಭಾವಭ್ರಮೆಯಡಗದೆ
ಮಾಯೆ ಮೋಹವಳಿಯದೆ
ಸಾಕಾರವಿಲ್ಲದ ಬಯಲಿನೊಳು ಕೂಡುವೆನೆಂದೊಡೆ
ಆಗುವುದೇನಯ್ಯಾ?

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರನ
ಮಹಾ ಬಯಲೊಳಗೆ ಬಯಲಾಗಲು
ನಿರ್ಭಯ ಬೇಕಯ್ಯಾ !

## ೨೩೦

ಹೃನ್ಮಂದಿರ ಗೋಪುರದೊಳು
ಪ್ರಣವಾಕಾರದ ಘಂಟೆ
ಓಂಕಾರ ಸ್ವರದೊಡನೆ
ನಿನದಿಸುತ್ತಿಹುದು ಆಲಿಸಿರೊ ;
ಒಂದು ನೂರೊಂದಾಗಿ
ನೂರೊಂದು ಒಂದಾಗಿ
ನಾದಮಯವಾಗಿ
ಕಿವಿಗಿಂಪಾಗಿಹುದು ಆಲಿಸಿರೊ ;
ಶಿವಸಿದ್ಧಾಂತವು ಮೂಡಿ
ಮೂವತ್ತಾರು ತತ್ತ್ವವು ಕೂಡಿ
ಪಿಂಡಾಂಡ ಬ್ರಹ್ಮಾಂಡಗಳೆರಡು
ಸುಂದರ ಸಮನ್ವಯವಾಗಿ
ಒಳ ಹೊರಗು ಉಲಿಯಾಗಿ
ಮನಕಿಂಪಾಗಿ ಮೊಳಗುತಿಹುದು ಆಲಿಸಿರೊ !
ಓಂಕಾರ ಝೇಂಕಾರ
ಸುತ್ತೆಲ್ಲ ತುಂಬಿದಡೆ
ಸಮರಸ ಸವಿಸೊಗ ಸಾಧ್ಯವಯ್ಯಾ

ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

# ಪಾರಿಭಾಷಿಕ ಶಬ್ದಗಳು

೧) ತ್ರಿವಿಧ ಗುರು : ೧. ದೀಕ್ಷಾಗುರು, ೨. ಶಿಕ್ಷಾಗುರು, ೩. ಮೋಕ್ಷಗುರು.

೨) ತ್ರಿವಿಧ ದೀಕ್ಷೆ : ೧. ಕ್ರಿಯಾದೀಕ್ಷೆ. ೨.ಮಂತ್ರ–ದೀಕ್ಷೆ, ೩. ವೇಧಧೀಕ್ಷೆ.

೩) ತ್ರಿವಿಧ ಮಲ : ೧. ಕಾರ್ಮಿಕಮಲ, ೨. ಮಾಯಶಾಮಲ, ೩. ಆಣವಮಲ.

೪) ತ್ರಿವಿಧ ಪ್ರಸಾದ:೧. ಶುದ್ಧಪ್ರಸಾದ ೨. ಸಿದ್ಧ-ಪ್ರಸಾದ, ೩. ಪ್ರಸಿದ್ಧಪ್ರಸಾದ.

೫) ತ್ರಿವಿಧ ಪ್ರಸಾದಗಳು : ೧, ಸಮಯಪ್ರಸಾದಿ, ೨. ನಿಚ್ಚಪ್ರಸಾದಿ, ೩. ಅಚ್ಚಪ್ರಸಾದಿ.

೬) ತ್ರಿವಿಧಾರ್ಪಣ: ೧. ಕಾಯಾರ್ಪಣ, ೨. ಕರಣಾರ್ಪಣ, ೩. ಭಾವಾರ್ಪಣ.

೭) ತ್ರಿವಿಧ ತನು: ೧. ಸ್ಥೂಲತನು, ೨. ಸೂಕ್ಷ್ಮತನು, ೩. ಕಾರಣತನು.

೮) ಅಂಗತ್ರಯ : ೧. ತ್ಯಾಗಾಂಗ, ೨. ಭೋಗಾಂಗ, ೩. ಯೋಗಾಂಗ.

೯) ಭುವನತ್ರಯ : ೧. ಸ್ವರ್ಗ. ೨. ಮರ್ತ್ಯ ೩. ಪಾತಾಳ.

೧೦) ಮೂರ್ತಿತ್ರಯವು ೧. ಬ್ರಹ್ಮ, ೨. ವಿಷ್ಣು. ೩. ಮಹೇಶ್ವರ.

೧೧) ಜೀವತ್ರಯವು ; ೧. ವಿಶ್ವ. ೨. ತೈಜಸ. ೩. ಪ್ರಾಜ್ಞ.

೧೨) ಈಷಣತ್ರಯವು : ೧. ದಾರೇಷಣ. ೨. ಪುತ್ರೇ–ಷಣ, ೩. ವಿತ್ತೇಷಣ.

೧೩) ಗುಣತ್ರಯವು ; ೧. ಸತ್ವಗುಣ, ೨. ರಜೋ–ಗುಣ, ೩. ತಮೋಗುಣ.

೧೪) ಅಂತಃಕರಣಚತುಷ್ಟಯವು ; ೧. ಮನ, ೨. ಬುದ್ಧಿ, ೩. ಚಿತ್ತ, ೪. ಅಹಂಕಾರ.

೧೫) ಚತುರ್ವಿಧ ಅನುಭವ : ೧. ಧ್ಯಾನ, ೨. ಮೌನ, ೩. ನಿತ್ಯ, ೪. ನೇಮ.

೧೬) ಪಂಚವಿಧವಿಭೂತಿ : ೧. ಭಸಿತ, ೨. ಭೂತಿ, ೩. ಭಸ್ಮ, ೪. ಕ್ಷಾರ, ೫. ರಕ್ಷೆ.

೧೭) ಪಂಚಕರ್ಮೇಂದ್ರಿಯ : ೧. ಪಾದ, ೨. ಪಾಣಿ, ೩. ಗುದ, ೪. ಗುಹ್ಯ, ೫. ವಾಕ್.

೧೮) ಪಂಚಜ್ಞಾನೇಂದ್ರಿಯ : ೧. ಮೂಗು, ೨. ನಾ-ಲಿಗೆ, ೩. ಕಣ್ಣು, ೪. ತ್ವಚ, ೫. ಕಿವಿ.

೧೯) ಪಂಚವಾಯುಗಳು : ೧. ಪ್ರಾಣ, ೨. ಅಪಾನ, ೩. ಉದಾನ, ೪. ಸಮಾನ, ೫. ವ್ಯಾನ.

೨೦) ಪಂಚವಿಷಯಗಳು : ೧. ಗಂಧ, ೨. ರೂಪ, ೩. ರಸ, ೪. ಸ್ಪರ್ಶ, ೫. ಶಬ್ದ.

೨೧) ಪಂಚಭೂತಗಳು : ೧. ಪೃಥ್ವಿ, ೨. ಅಪ್ಪು, ೩. ತೇಜ, ೪. ವಾಯು, ೫. ಆಕಾಶ.

೨೨) ಷಟ್‌ಸ್ಥಲಗಳು : ೧. ಭಕ್ತ, ೨. ಮಹೇಶ, ೩. ಪ್ರಸಾದಿ, ೪. ಪ್ರಾಣಲಿಂಗಿ, ೫. ಶರಣ, ೬. ಐಕ್ಯ.

೨೩) ಷಡ್ವಿಧಭಕ್ತಿ : ೧. ಶ್ರದ್ಧಾ, ೨. ನಿಷ್ಠಾ, ೩. ಅವಧಾನ, ೪. ಅನುಭವ, ೫. ಆನಂದ, ೬. ಸಮರಸ.

೨೪) ಅಷ್ಟಾವರಣ : ೧. ಗುರು, ೨. ಲಿಂಗ, ೩. ಜಂಗಮ, ೪. ಪಾದೋದಕ, ೫. ಪ್ರಸಾದ, ೬. ವಿ-ಭೂತಿ, ೭, ರುದ್ರಾಕ್ಷಿ, ೮. ಮಂತ್ರ.

೨೫) ಅಷ್ಟವಿಧಾರ್ಚನೆ : ೧. ಭಸ್ಮ ೨. ಗಂಧ, ೩. ಅಕ್ಷತೆ, ೪. ಪತ್ರಿ, ೫. ಪುಷ್ಪ, ೬, ಧೂಪ ೭. ದೀಪ, ೮. ನೈವೇದ್ಯ.

೨೬) ಅಷ್ಟೈಶ್ವರ್ಯ : ೧. ರಾಜ್ಯ, ೨. ಭಾಂಡಾರ, ೩. ಸೈನ್ಯ, ೪. ಆನೆ, ೫. ಕುದುರೆ, ೬. ಛತ್ರ, ೭. ಚಾಮರ, ೮. ಆಂದೋಲನ.

೨೭) ಅಷ್ಟಸಿದ್ಧಿಗಳು : ೧. ಅಣಿಮಾ, ೨. ಮಹಿಮಾ, ೩. ಗರಿಮಾ, ೪. ಲಘಿಮಾ, ೫. ಪ್ರಾಪ್ತಿ, ೬. ಪ್ರಾಕಾಮ್ಯ, ೭. ಈಶತ್ವ, ೮. ವಶಿತ್ವ.

೨೮) ಅಷ್ಟ ಭೋಗಗಳು ; ೧. ಮನೆ, ೨. ಹಾಸಿಕ, ೩. ವಸ್ತ್ರ, ೪. ಆಭರಣ, ೫. ಸ್ತ್ರೀ, ೬. ಪುಷ್ಪ, ೭. ಗಂಧ ೮. ತಾಂಬೂಲ.

೨೯) ದಶವಿಧ ಪಾದೋದಕ : ೧. ಗುರು ಪಾದೋ-ದಕ ೨. ಲಿಂಗೋದಕ, ೩. ಜಂಗಮ ಪಾದೋದಕ, ೪. ಸ್ಪರ್ಶ-ನೋದಕ, ೫. ಅವಧಾನೋದಕ, ೬. ಆಪ್ಯಾಯನೋದಕ, ೭. ಹಸ್ತೋದಕ, ೮. ಪರಿಣಾಮೋದಕ, ೯. ನಿರ್ನಾಮೋದಕ, ೧೦. ಸತ್ಯೋದಕ.

೩೦) ಪಂಚವಿಂಶ-ತತ್ತ್ವ ೧. ಪಂಚ ಕರ್ಮೇಂದ್ರಿಯ, ೨. ಪಂಚ ಜ್ಞಾನೇಂದ್ರಿಯ, ೩. ಪಂಚ ವಿಷಯಗಳು, ೪. ಪಂಚ ವಾಯುಗಳು, ೫. ಪಂಚ ಕರಣಂಗಳು=೨೫.

೩೧) ಮೂವತ್ತಾರು ತತ್ತ್ವಗಳು : ೧. ಶಿವ, ೨. ಶಕ್ತಿ ೩. ಸದಾಶಿವ, ೪. ಈಶ್ವರ, ೫. ಶುದ್ಧ ವಿದ್ಯಾ, ೬. ಮಾ-ಯಾ, ೭. ಕಲಾ, ೮. ವಿದ್ಯಾ. ೯. ರಾಗ, ೧೦. ಕಾಲ, ೧೧. ನಿಯತಿ, ೧೨. ಪುರುಷ, ೧೩. ಪ್ರಕೃತಿ ೧೪. ಬುದ್ಧಿ, ೧೫. ಅಹಂಕಾರ, ೧೬. ಮನ, ೧೭. ಶ್ರೋತ್ರ, ೧೮. ತ್ವಕ್ ೧೯. ನೇತ್ರ, ೨೦. ಜಿಹ್ವಾ, ೨೧. ಘ್ರಾಣ, ೨೨. ವಾಕ್, ೨೩. ಪಾಣಿ, ೨೪. ಪಾದ, ೨೫. ಪಾಯು, ೨೬. ಉಪಸ್ಥ ೨೭. ಶಬ್ದ, ೨೮. ಸ್ಪರ್ಶ, ೨೯. ರೂಪ, ೩೦. ರಸ, ೩೧. ಗಂಧ, ೩೨. ಆಕಾಶ, ೩೩. ವಾಯು, ೩೪. ಅಗ್ನಿ, ೩೫. ಜಲ, ೩೬. ಪೃಥ್ವಿ.

೩೨) ಸಪ್ತ ವ್ಯಸನಗಳು : ೧. ತನುವ್ಯಸನ ೨. ಮನೋವ್ಯಸನ, ೩. ಕ್ರೋಧವ್ಯಸನ, ೪. ವಿಷಯ ವ್ಯಸನ, ೫. ಧನವ್ಯಸನ, ೬. ರಾಜ್ಯವ್ಯಸನ ೭. ಸೇವಕ ವ್ಯಸನ.

೩೩) ಅಷ್ಟ ಮದಗಳು : ೧. ಕುಲಮದ, ೨. ಶೀಲಮದ, ೩. ಧನಮದ, ೪. ರೂಪಮದ, ೫. ಯೌವನಮದ, ೬. ವಿದ್ಯಾಮದ, ೭. ತಪೋಮದ, ೮. ರಾಜ್ಯಮದ.

೩೪) ಷಡ್ವೈರಿಗಳು : ೧. ಕಾಮ, ೨. ಕ್ರೋಧ, ೩. ಲೋಭ, ೪. ಮೋಹ, ೫. ಮದ, ೬. ಮತ್ಸರ.

೩೫) ಪಂಚ ಕ್ಲೇಶಗಳು : ೧. ಅವಿದ್ಯೆ, ೨. ಅಸ್ಮಿತ, ೩, ರಾಗ, ೪. ದ್ವೇಷ, ೫. ಅಭಿನಿವೇಶ.

೩೬) ತಾಪತ್ರಯ : ೧. ಆಧ್ಯಾತ್ಮಿಕ, ೨, ಆಧಿಭೌತಿಕ, ೩. ಆಧಿದೈವಿಕ.

೩೭) ಪಂಚಾಚಾರಗಳು : ೧. ಲಿಂಗಾಚಾರ, ೨. ಸದಾ-ಚಾರ, ೩. ಶಿವಾಚಾರ, ೪. ಗಣಾಚಾರ, ೫. ಭೃತ್ಯಾ-ಚಾರ.

೩೮) ಕರಣತ್ರಯ : ೧. ಮನಸ್ಸು, ೨. ವಚನ, ೩. ಕಾಯ.

೩೯) ಷಡೂರ್ಮಿಗಳು : ೧. ಜನ್ಮ, ೨. ಮರಣ, ೩. ಕ್ಷುಧಾ, ೪. ತೃಷಾ. ೫. ಹರ್ಷ, ೬. ಶೋಕ,

೪೦) ಲಿಂಗತ್ರಯ : ೧. ಇಷ್ಟಲಿಂಗ, ೨. ಪ್ರಾಣ-ಲಿಂಗ, ೩. ಭಾವಲಿಂಗ.

೪೧) ತ್ರಿವಿಧಕರ್ಮ : ೧. ಸಂಚಿತಕರ್ಮ, ೨. ಆಗಾಮಿ-ಕರ್ಮ, ೩. ಪ್ರಾರಬ್ಧ ಕರ್ಮ.

೪೨) ಏಕೋತ್ತರ ಶತಸ್ಥಲ : ೧. ಪಿಂಡಸ್ಥಲ- ೨. ಪಿಂಡ-ಜ್ಞಾನಸ್ಥಲ, ೩. ಸಂಸಾರ ಹೇಯಸ್ಥಲ, ೪. ಗುರು-ಕಾರುಣ್ಯಸ್ಥಲ. ೫. ಲಿಂಗಧಾರಣ ಸ್ಥಲ, ೬. ಭಸ್ಮಧಾರಣಸ್ಥಲ, ೭. ರುದ್ರಾಕ್ಷಿಧಾರಣ ಸ್ಥಲ, ೮. ಮಂತ್ರ ಜಪ ಸ್ಥಲ, ೯. ಭಕ್ತಿ-ಮಾರ್ಗ ಕ್ರಿಯಾಸ್ಥಲ, ೧೦. ಉಭಯಸ್ಥಲ, ೧೧. ತ್ರಿವಿಧ ಸಂಪತ್ತಿಸ್ಥಲ, ೧೨. ಚತುರ್ವಿಧ ಸಾರಾಯ ಸ್ಥಲ, ೧೩. ಸೋ-ಪಾಧಿ ದಾನ (ಉಪಾಧಿಮಾಟ) ಸ್ಥಲ, ೧೪. ನಿರುಪಾಧಿದಾನ (ನಿರುಪಾಧಿ ಮಾಟ) ಸ್ಥಿತಿ ೧೫. ಸಹಜದಾನ (ಸಹಜಮಾಟ) ಸ್ಥಲ, ೧೬. ದೀಕ್ಷಾ ಗುರುಸ್ಥಲ, ೧೭. ಶಿಕ್ಷಾ ಗುರುಸ್ಥಲ, ೧೮. ಜ್ಞಾನ ಗುರುಸ್ಥಲ, ೧೯. ಕ್ರಿಯಾ ಲಿಂಗಸ್ಥಲ, ೨೦. ಭಾವ ಲಿಂಗಸ್ಥಲ, ೨೧ ಜ್ಞಾನಲಿಂಗಸ್ಥಲ, ೨೨. ಸ್ವಯ ಜಂಗ-ಮ ಸ್ಥಲ, ೨೩. ಚರ ಜಂಗಮಸ್ಥಲ, ೨೪. ಪರ ಜಂಗಮ ಸ್ಥಲ, ೨೫. ಮಹೇಶ ಪ್ರಶಂಸಾ ಸ್ಥಲ, ೨೬. ಲಿಂಗ ನಿಷ್ಠಾ ಸ್ಥಲ, ೨೭. ಪೂರ್ವಾಶ್ರಯ ನಿರಸನ ಸ್ಥಲ, ೨೮. ಸರ್ವಾದ್ವೈತ ನಿರ-ಸನ ಸ್ಥಲ, ೨೯. ಆಹ್ವಾನ ವಿಸರ್ಜನ ನಿರಸನ ಸ್ಥಲ, ೩೦. ಅಷ್ಟ-ಮೂರ್ತಿ ನಿರಸನ ಸ್ಥಲ, ೩೧. ಸರ್ವ ತತ್ವ ನಿರಸನ ಸ್ಥಲ, ೩೨. ಶಿವ ಜಗಮನ್ಮಯ ಸ್ಥಲ, ೩೩. ಭಕ್ತದೇಹಿಕ ಲಿಂಗ ಸ್ಥಲ, ೩೪. ಕ್ರಿಯಾಗಮ ಸ್ಥಲ, ೩೫. ಭಾವಾಗಮ ಸ್ಥಲ,

೩೬. ಜ್ಞಾನಾಗಮ ಸ್ಥಲ, ೩೭. ಸಕಾಯ ಸ್ಥಲ, ೩೮. ಅಕಾಯ ಸ್ಥಲ, ೩೯. ಪರಕಾಯ ಸ್ಥಲ, ೪೦. ಧರ್ಮಾಚಾರ-ಸ್ಥಲ, ೪೧. ಭಾವಾಚಾರ ಸ್ಥಲ, ೪೨. ಜ್ಞಾಚಾರ ಸ್ಥಲ, ೪೩. ಪ್ರಸಾದ ಸ್ಥಲ. ೪೪. ಗುರುಮಹಾತ್ಮ್ಯ ಸ್ಥಲ, ೪೫. ಲಿಂಗ-ಮಹಾತ್ಮ್ಯ ಸ್ಥಲ, ೪೬. ಜಂಗಮ ಮಹಾತ್ಮ್ಯ ಸ್ಥಲ, ೪೭. ಭಕ್ತ ಮಹಾತ್ಮ್ಯ ಸ್ಥಲ, ೪೮. ಶರಣ ಮಹಾತ್ಮ್ಯ ಸ್ಥಲ, ೪೯. ಪ್ರಸಾದ ಮಹಾತ್ಮ್ಯ ಸ್ಥಲ, ೫೦. ಕಾಯಾನುಗ್ರಹ ಸ್ಥಲ. ೫೧. ಇಂದ್ರಿಯಾನುಗ್ರಹ ಸ್ಥಲ, ೫೨. ಪ್ರಾಣಾನುಗ್ರಹ ಸ್ಥಲ, ೫೩. ಕಾಯಾರ್ಪಣ ಸ್ಥಲ, ೫೪. ಕರಣಾರ್ಪಣ ಸ್ಥಲ, ೫೫. ಭಾವಾ-ರ್ಪಣ ಸ್ಥಲ ೫೬. ಶಿಷ್ಯ ಸ್ಥಲ, ೫೭. ಶುಶ್ರೂಷಾಸ್ಥಲ, ೫೮. ಸೇವ್ಯ ಸ್ಥಲ, ೫೯. ಪ್ರಾಣಲಿಂಗಿ ಸ್ಥಲ, ೬೦. ಪ್ರಾಣಲಿಂಗಾ-ರ್ಚನಾ ಸ್ಥಲ, ೬೧, ಶಿವಯೋಗ ಸಮಾಧಿ ಸ್ಥಲ, ೬೨. ಲಿಂಗ-ನಿಜಸ್ಥಲ, ೬೩. ಅಂಗ ಲಿಂಗಸ್ಥಲ, ೬೪. ಆತ್ಮಸ್ಥಲ, ೬೫. ಅಂತರಾತ್ಮ ಸ್ಥಲ, ೬೬. ಪರಮಾತ್ಮ ಸ್ಥಲ, ೬೭. ನಿರ್ದೇಹಾ-ಗಮ ಸ್ಥಲ, ೬೮. ನಿರ್ಭಾವಾಗಮ ಸ್ಥಲ, ೬೯. ನಷ್ಟಾಗಮ ಸ್ಥಲ, ೭೦. ಆದಿ ಪ್ರಸಾದಿ ಸ್ಥಲ, ೭೧. ಅಂತ್ಯ ಪ್ರಸಾದಿ ಸ್ಥಲ, ೭೨. ಸೇವ್ಯ ಪ್ರಸಾದಿ ಸ್ಥಲ, ೭೩. ಶರಣಸ್ಥಲ, ೭೪. ತಾಮಸ ನಿರಸನಸ್ಥಲ, ೭೫. ನಿರ್ದೇಶಸ್ಥಲ, ೭೬. ಶೀಲ ಸಂಪಾದನ ಸ್ಥಲ, ೭೭. ದೀಕ್ಷಾಪಾದೋದಕ ಸ್ಥಲ, ೭೮. ಶಿಕ್ಷಾಪಾದೋದಕ ಸ್ಥಲ, ೭೯. ಜ್ಞಾನಪಾದೋದಕ ಸ್ಥಲ, ೮೦. ಕ್ರಿಯಾ ನಿಷ್ಪತ್ತಿಸ್ಥಲ, ೮೧. ಭಾವ ನಿಷ್ಪತ್ತಿಸ್ಥಲ,

೮೨. ಜ್ಞಾನ ನಿಷ್ಪತ್ತಿಸ್ಥಲ, ೮೩. ಪಿಂಡಾಕಾಶ ಸ್ಥಲ, ೮೪. ಬಿಂದ್ವಾಕಾಶಸ್ಥಲ, ೮೫. ಮಹಾಕಾಶಸ್ಥಲ, ೮೬. ಕ್ರಿಯಾಪ್ರಕಾಶ ಸ್ಥಲ, ೮೭.ಭಾವಪ್ರಕಾಶಸ್ಥಲ, ೮೮. ಜ್ಞಾನಪ್ರಕಾಶ ಸ್ಥಲ, ೮೯. ಐಕ್ಯಸ್ಥಲ, ೯೦. ಆಚಾರ ಸಂಪತ್ತಿಸ್ಥಲ, ೯೧. ಏಕ ಭಾಜನ ಸ್ಥಲ, ೯೨. ಸಹಭಾಜನಸ್ಥಲ, ೯೩. ಸ್ವೀಕೃತಿ ಪ್ರಸಾದ ಸ್ಥಲ, ೯೪. ಶಿಷ್ಯಾದನಸ್ಥಲ, ೯೫. ಚರಾಚರ ಲಯಸ್ಥಲ, ೯೬. ಭಾಂಡ ಸ್ಥಲ, ೯೭. ಭಾಜನಸ್ಥಲ, ೯೮. ಅಂಗಾಲೇಪನಸ್ಥಲ, ೯೯. ಸ್ವಪರಾಜ್ಞಸ್ಥಲ, ೧೦೦. ಭಾವಾಭಾವ ಲಯ ಸ್ಥಲ, ೧೦೧. ಜ್ಞಾನಶೂನ್ಯಸ್ಥಲ.

★

# ವಚನಗಳ ಆಕಾರಾದಿ

★